# ಕನಕಣ್ಣ



ಶ್ರೀನಿವಾಸ



ಜೀವನ ಕಾರ್ಯಾಲಯ
ಬೆಂಗಳೂರು

# ಮುನ್ನುಡಿ

ಈ ವರ್ಷ ನಮ್ಮ ಜನ ಕನಕದಾಸರ ಚತುಶ್ಶತಮಾನೋತ್ಸವವನ್ನು ಆಚರಿಸಿದ ಸಂದರ್ಭದಲ್ಲಿ ನಾನು ಈ ದೃಶ್ಯವನ್ನು ಬೆಂಗಳೂರು ಆಕಾಶವಾಣಿಯ ಪ್ರವರ್ತಕರ ಅಪೇಕ್ಷೆಯಂತೆ ಅವರಿಂದ ಪ್ರಸಾರವಾಗಲು ರಚಿಸಿದೆನು.

ಒಂದು ಸಂಕ್ಷಿಪ್ತರೂಪ ಆಕಾಶವಾಣಿಯಿಂದ ಪ್ರಸಾರವಾದ ನಂತರ ಪೂರ್ಣಕೃತಿಯನ್ನು "ಜೀವನ" ಪತ್ರಿಕೆಯ ಇಪ್ಪತ್ತೈದು ವರ್ಷದ ಉತ್ಸವ ಸಂಚಿಕೆಯಲ್ಲಿ ಪ್ರಕಟಿಸಲಾಯಿತು.

ಅದನ್ನೇ ಈಗ ಪುಸ್ತಕರೂಪದಲ್ಲಿ ಪ್ರಕಟಿಸುತ್ತಿದೆ.

ಪುರಂದರ ಕನಕದಾಸರು ಹರಿದಾಸ ಇತಿಹಾಸದಲ್ಲಿ ಯಮಳರು. ಇವರನ್ನು ಕುರಿತ ನನ್ನ ಈ ಕೃತಿಗಳೂ ಯಮಳವೇ. ಎರಡೂ ಒಂದೇ ಮನೋಧರ್ಮವನ್ನು ಪ್ರಕಟಮಾಡುತ್ತವೆ. ಓದುವವರು ಒಂದಿಗೇ ಓದಿದರೆ ಇವು ಒಂದಕ್ಕೆ ಒಂದು ಪೂರಕವಾಗಿ ಕಾಣುತ್ತವೆ ಎಂದು ನನ್ನ ತಿಳಿವಳಿಕೆ.

ಬೆಂಗಳೂರು
ಶ್ರಾವಣ ಶುದ್ಧ ತೃತೀಯೆ
೩೧-೭-೧೯೬೫

ಶ್ರೀನಿವಾಸ

## ಪಾತ್ರಗಳು

ಕನಕಣ್ಣ

ವ್ಯಾಸರಾಯ

ಪುರಂದರದಾಸ

ಕನಕಣ್ಣನ ಮಗ

ಕನಕಣ್ಣನ ರಾಣಿ

ಶ್ರೀನಿವಾಸತೀರ್ಥ : ವ್ಯಾಸರಾಯನ ಉತ್ತರಾಧಿಕಾರಿ ಸ್ವಾಮಿ

ಗೋವಿಂದ ಒಡೆಯ : ಇವರ ಜೊತೆಯ ಹಿರಿಯ

ಮಧ್ವಪತಿ : ಪುರಂದರದಾಸನ ಮಗ

ಮಹಂತ : ತಿರುಪತಿ ದೇವಾಲಯದ ಕಾರ್ಯನಿರ್ವಾಹಕ

ಮಾಲಿ : ಕನಕಣ್ಣನ ರಾಣಿಯ ಚೇಟಿ

ಸೇವಕರು, ಬಂಕಾಪುರದ ನಿವಾಸಿಗಳು, ಓಲಗದವರು, ಇತ್ಯಾದಿ

# ಕನಕಣ್ಣ

(ತೆರೆಯ ಹಿಂದೆ ಗಾನ ಕೇಳುತ್ತದೆ)

ಶ್ರೀ ಗಿರಿಜೇಶ್ವರನಾತ್ಮಾಭಿರಾಮ
ಸದ್ವಾಗೀಶ ಪಿತ ಪರಂಧಾಮ
ಕಾಗಿನೆಲೆಯ ರಂಗ ಸುರಸಾರ್ವಭೌಮ
ಸುತ್ಯಾಗಿ ಪಾಲಿಸೊ ಪೂರ್ಣಕಾಮ

ಶ್ರೀರಮಣ ಸರಸಿಜದಳಾಕ್ಷ ಮು
ರಾರಿ ಸಚರಾಚರ ಭರಿತ ದುರಿ
ತಾರಿ ನಿತ್ಯಾನಂದ ನಿರ್ಜರ ನಿಕರ ದಾತಾರ
ವಾರಿಜಾಂಬಕ ವರಗುಣತ್ರಯ
ಮಾರಪಿತ ವೇದಾಂತನುತ ವರ
ಪೌರ ಚೆನ್ನಿಗರಾಯ ಪಾಲಿಸು ನಮಗೆ ಸತ್ಕೃಪೆಯ

ಶರಧಿಶಯನ ಮುಕುಂದ ಕಂಸಾ
ಸುರಮಥನ ಸುರಮೌಳಿವಂದಿತ
ಗಿರಿಧರಾಚ್ಯುತ ವೇಣುನಾದವಿನೋದ ಭವದೂರ
ಸರಸಿಜೋದ್ಭವನುತ ದಯಾ ಸಾ
ಗರ ಮುರಾಂತಕ ದೇವವರಪುರ
ದರಸ ಚೆನ್ನಿಗರಾಯ ಪಾಲಿಸು ಸಕಲ ಸಜ್ಜನರ

ಉರಗರಿಪು ಕೇತನ ವಿಭೀಷಣ
ವರದ ಹರಿಸದ್ಭಕ್ತ ಪೋಷಣ
ದುರಿತ ಕುಲಗಿರಿವಜ್ರ ನರಕಾಂತಕ ಮಹಾಮಹಿಮ
ಪರಮಪುರುಷ ಯಶೋದೆಯಾತ್ಮಜ
ದುರಿತ ದುಃಖ ವಿನಾಶ ವರಪುರ
ದರಸ ಚೆನ್ನಿಗರಾಯ ರಕ್ಷಿಸು ನಮ್ಮನನವರತ

## ಸ್ಥಾನ : ೧

ವ್ಯಾಸ ಸಮುದ್ರದ ಬಳಿ ಕನಕದಾಸ
ದಾರಿ ನಡೆಯುತ್ತ ತನಗೆ ತಾನೇ ಮಾತನಾಡಿಕೊಳ್ಳುತ್ತಿದ್ದಾನೆ.

ಕನಕಣ್ಣ :

ಶ್ರೀಯರಸ ಕಾಗಿನೆಲೆಯಾದಿ ಕೇಶವರಾಯ
ನಿನ್ನ ಪ್ರೇರಣೆಯಿಂದ ಈ ಹಿರಿಯರನು ಅರಸಿ
ಇಲ್ಲಿ ಬಂದಿಹೆನು. ಇದುವರೆಗೆ ಎಲ್ಲವ ನಡಸಿ
ನನ್ನ ಚೇತನವ ನಿನ್ನೊಳಿಗಕೆ ಕರೆದೆಳೆದು
ಕಾಪಾಡಿಕೊಂಡು ಬಂದಿರುವೆ. ಈವರೆಗೆಂತು
ಅಂತೆ ಮುಂದೂ ನೀನೆ ನಡಸಿ ರಕ್ಷಿಸುವೆ. ಇದು
ಮನಕೆ ನಿಶ್ಚಯವಪ್ಪ ಭಾಗ್ಯವನನುಗ್ರಹಿಸು.
ಬಾಡದೆಪ್ಪತ್ತೈದರದು ನಾಡ ದೊರೆಮನೆಯ
ಮಗುವಾಗಿ ಜನ್ಮವನು ಕೊಟ್ಟೆ. ನಿನ್ನಂಘ್ರಿಯನು
ನಂಬಿ ನಡೆಯುತಲಿದ್ದ ತಂದೆಯನು ನೀಡಿದೆ.
ನೀನಿತ್ತ ಸೌಭಾಗ್ಯ ತುಂಬಿ ತುಳುಕಿದ್ದರೆಯು,
ನಿನ್ನ ರಾಣಿಯು ದಾಸಿಯರ ದಾಸಿ ತಾನೆನುತ,
ಹೆಮ್ಮೆಯೆಂಬುದರ ಲವಲೇಶ ಸುಳಿಯದ ಮನದಿ,

ಜಗದ ಜನ ಸಿನ್ನ ಮಕ್ಕಳು ಎಂದು, ಸಾಡನೇ
ತನ್ನ ಪೂಜೆಯ ವಸ್ತು ಎಂದು, ಎಣಿಸಿದ ಓರ್ವ
ದೇವತಾಸ್ತ್ರೀಯು ನನ್ನಬೈಂಬಿಂದೆನ್ನಿಸಿದೆ.
ಬಹುಕಾಲ ಮಕ್ಕಳಿಲ್ಲದೆ ನನ್ನ ಪಡೆದವರು
ಆ ತಾಯಿತಂದೆ ನನ್ನನು ನಿನ್ನ ಕಸಿಕರದ
ಕುರುಹು ಒಂದೆಂದೆಣಿಸಿ, ಲಾಲಿಸುತ ಪಾಲಿಸುತ
ಸಂತಸದಿ ದಿನ ಕಳೆದು, ವೈಕುಂಠದಲಿ ನಿನ್ನ
ಸೇವೆಯನು ಗೆಯ್ಯುವರೆ ಕರೆಬರಲು, ಹನ್ನೆರಡು
ವರುಷ ಸಂದಿದ್ದ ಕುವರನ ನಿನ್ನ ರಕ್ಷೆಯಲಿ
ಇಲ್ಲಿಟ್ಟು, ನಿನ್ನ ಸಾರಿದರು. ಆ ಇರ್ವರಲಿ
ತಂದೆ ತಾಯಾಗಿ ನನ್ನನು ನೋಡಿಕೊಂಡಿದ್ದ
ಸೀನೆ ಈ ಜಗದ ಬೇರೆಯ ಜೀವಗಳಲಿರುತ
ಬಳಿಕಲೂ ನನ್ನ ಪಾಲಿಸಿದೆ. ಗುರುವಾಗಿದ್ದು
ಧರ್ಮವನು ಕಲಿಸಿ ಮಂತ್ರವನು ಉಪದೇಶಿಸಿದೆ.
ನಾಡನಾಳುವ ಕಾರ್ಯವನು ನನ್ನ ಕೈಯಿಂದ
ಮಾಡಿಸಿದೆ. ಸಿನಗೆ ಆಲಯಗಳನು ನಿರ್ಮಿಸುವ
ಬುದ್ಧಿಯನು ನೀಡಿದೆ. ಸೇವೆ ಮಾಡಿಸಿಕೊಂಡೆ.
ಗುಣವಂತೆಯೊಬ್ಬಳನು ಸತಿಯೆನಿಸಿ ಈ ಮಗನ
ಮನೆಯ ಬೆಳಗಿಸಿದೆ. ಅವಳಿಂದ ಸಂತಾನವನು
ದಯಪಾಲಿಸಿದೆ. ತುಂಬು ಸುಖದ ಮಧ್ಯದಿ ನಿನ್ನ
ಮರೆಯದಂದದಿ ಸತತ ನನ್ನ ಬುದ್ಧಿಯ ತಿದ್ದಿ
ಸಂರಕ್ಷಿಸಿದೆ. ತುಂಬು ಸುಖ ತುಂಬಿ ತುಳುಕುತಿರೆ
ಮನದಿ ವೈರಾಗ್ಯವನು ಬಿತ್ತಿ ಸುಖವನು ತೊರೆದು
ಸತ್ಸಂಗವನು ಅರಸಿ ಹೊರಡೆಂದು ಬೆಸಸಿರುವೆ.
ಓಂ ನಮೋ ನಾರಾಯಣಾಯ. ಓಂ ಓಂ ನಮಃ
ಕಾಗಿನೆಲೆ ಆದಿಕೇಶವ, ಪುರ ನೃಸಿಂಹಾಯ.
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ

ಶರಣಂವ್ರಜ ಎಂದ ತಾಯ್ತ್ತಂದೆ ಜೀವೇಶ
ನಿನ್ನಾಜ್ಞೆಯನು ನಡಸ ನೆನೆದ ಆ ಪ್ರಹ್ಲಾದ,
ಧ್ರುವ ಕುಮಾರರ ನೀನು ಪತಿಕರಿಸಿ ಪಾಲಿಸಿದೆ.
ಅಂತೆ ಪತಿಕರಿಸಿ ಪಾಲಿಸುವೆ ಈ ಹಸುಳೆಯನು.
ಸರ್ವದಾ ಚೇತನದಿ ಬೆಳಗು, ನಾ ನಡೆವ ನಡೆ
ನಿನ್ನ ಇಚ್ಛೆಯ ರೇಖೆಯನು ಒಂದು ಎಳೆಯನಿತು
ಸಹ ಬಿಡದ ತೆರ ನಡಸು. ನನ್ನ ಉದ್ಧರಿಸು.

## ಸ್ಥಾನ: ೨

ವ್ಯಾಸ ಸಮುದ್ರದ ಕಟ್ಟೆಯ ಮೇಲೆ ವ್ಯಾಸರಾಯ, ಪುರಂದರದಾಸ.

ವ್ಯಾಸರಾಯ : ಈ ಬೆಳಗಿನಿಂದ ನಮಗೆ ಯಾವುದೋ ಭಾಗ್ಯ ಲಭಿಸುವುದರಲ್ಲಿದೆ ಎಂದು ಸೂಚನೆ ಆಗುತ್ತಲಿದೆ.

ಪುರಂದರದಾಸ : ಅನುಗ್ರಹ ಬೇಡಿ ಯಾವ ಚೇತನ ಬಳಿಗೆ ಸಾರುತ್ತಿದೆಯೋ, ಸಾರಲಿ, ಅನುಗ್ರಹ ಪಡೆಯಲಿ.

ವ್ಯಾಸರಾಯ : ಅನುಗ್ರಹ ಎನ್ನುವುದು ಅಭಿಮಾನಿಗಳ ಅಕ್ಕರೆಯ ಮಾತು. ಎಂದರೂ ನೀವು ಹತ್ತು ವರುಷದ ಹಿಂದೆ ನಮ್ಮ ಬಳಿ ಬಂದಾಗ ನಮಗೆ ಇದೇ ಸೂಚನೆ ಆಯಿತು. ಸ್ವಾಮಿಗಳು ಬಂದ ದಿನವೂ ಹೀಗೆಯೇ ಆಯಿತು. . .

ಪುರಂದರದಾಸ : ವಾದಿರಾಜ ಸ್ವಾಮಿಗಳು?

ವ್ಯಾಸರಾಯ : ಹೌದು. ಈ ದಿನ ಅದೇ ಸೂಚನೆ ಆಗುತ್ತಿದೆ. ಯಾವುದೋ ಪುಣ್ಯಚೇತನ ನಮ್ಮ ಚೇತನಕ್ಕೆ ಆನಂದ ನೀಡಲು ಬರುತ್ತಿದೆಯೆಂದು ನೆನೆಯುತ್ತೇವೆ. ಶ್ರೀಕೃಷ್ಣ ಈ ಜೀವನಕ್ಕೆ ನೀಡಿರುವ ಪರಮಸೌಭಾಗ್ಯ ಒಂದು ಇದು. ವಾತ್ಸಲ್ಯಮೂರ್ತಿ ನಮ್ಮ ದೇವರ ಕರುಣೆಗೆ ಪಾರವಿಲ್ಲ.

(ಕನಕಣ್ಣ ಸ್ವಲ್ಪ ದೂರದಲ್ಲಿ ಕಾಣುತ್ತಾನೆ.)

ಯಾರೊ ಬರುತ್ತಿದ್ದಾರೆ.

(ಕನಕಣ್ಣ ಹತ್ತಿರಕ್ಕೆ ಬಂದು ಕೈ ಮುಗಿದು)

ಕನಕಣ್ಣ : ಗುರು ಸನ್ನಿಧಾನಕ್ಕೆ ನಮೋ ನಮೋ. ಅಣ್ಣನವರ ಅಡಿಗಳಿಗೆ ನಮೋ ನಮೋ.

ವ್ಯಾಸರಾಯ : ಶುಭಮಸ್ತು. ಬನ್ನಿ ; ನೀವು ಯಾರು ?

ಕನಕಣ್ಣ : ಬಾಡದ ನಾಡ ಪ್ರಭುವಾಗಿದ್ದ ತಿಮ್ಮಣ್ಣ. ಗುರುಗಳು ಹರಿದಾಸರ ದಾಸನಾಗಿರು ಎಂದು ಅಪ್ಪಣೆ ಮಾಡಿದಾಗ ನನ್ನನ್ನು ಕನಕದಾಸ ಎಂದು ಕರೆದರು.

ಪುರಂದರದಾಸ : ಕಾಗಿನೆಲೆಯ ಕೇಶವ ದೇವಾಲಯವನ್ನು ನಿರ್ಮಿಸಿದ ಪ್ರಭುಗಳಲ್ಲವೇ ? ಗುರುಸನ್ನಿಧಾನ ಅಪ್ಪಣೆ ಕೊಡಿಸಿದ ಮಾತು ಕೈಗೂಡಿತು.

ವ್ಯಾಸರಾಯ . ಕಾಗಿನೆಲೆಯ ವಿಷಯ ಕೇಳಿದ್ದೆವು. ವಿವರ ನೆನಪಿಲ್ಲ. ಕನಕದಾಸರು ತಿಳಿಸಬೇಕು.

(ಕನಕಣ್ಣ ಪುರಂದರದಾಸನತ್ತ ನೋಡುತ್ತಾನೆ)

ಪುರಂದರದಾಸ : ಅಪ್ಪಣೆಯಾದರೆ ನನಗೆ ತಿಳಿದಿರುವಷ್ಟನ್ನು ನಾನು ಅರಿಕೆ ಮಾಡುತ್ತೇನೆ. ತಿಮ್ಮಣ್ಣ ಪ್ರಭು ಬಾಡದ ನಾಡನ್ನು ಧರ್ಮಿಷ್ಠರಾಗಿ ಹದಿನೆಂಟು ವರ್ಷ ಆಳಿದ್ದಾರೆ. ಬಾಡದ ನರಸಿಂಹದೇವರ ಮಂದಿರವನ್ನು ಹೊಸದಾಗಿ ಮಾಡಿದ್ದಾರೆ. ಕಾಗಿನೆಲೆಯ ಆದಿಕೇಶವದೇವರ ಮಂದಿರ ಶಿಥಿಲವಾಗಿತ್ತು. ಅದನ್ನು ಸರಿಪಡಿಸಬೇಕೆಂದು ಯೋಚಿಸಿದರು. ಧನದ ವಿಷಯ ಚಿಂತಿಸುತ್ತಿರುವಲ್ಲಿ ದೇವರು ಹೊನ್ನ ಕೊಪ್ಪರಿಗೆ ಇರುವ ಸ್ಥಳವನ್ನು ಸ್ವಪ್ನದಲ್ಲಿ ತಿಳಿಸಿದರು. ಪ್ರಭು ಅದನ್ನು ಅಗೆಸಿ ತೆಗೆದು ಆ ದೇವಾಲಯವನ್ನು ಹೊಸತಾಗಿ ನಿರ್ಮಿಸಿದರು. ಇದು ಈಗ ನಾಲ್ಕು ವರ್ಷದ ಮಾತು. ಅಗ ಸನ್ನಿಧಾನದ ಕಿವಿಗೆ ಬಿದ್ದಿರಬೇಕು. ಆ ದೇವಾಲಯವನ್ನು ನಿರ್ಮಿಸಿದ್ದೆ ಅಲ್ಲಿಯೇ ಸನ್ನಿಧಿಯಲ್ಲಿ ನಿಂತರೆಂದು

ಕೇಳಿದ್ದೆ. ಅಂದಿನಿಂದ ಇವರ ಪರವಾಗಿ ಇವರ ಮಕ್ಕಳು ನಾಡನ್ನು ನೋಡಿಕೊಳ್ಳುತ್ತಿದಾರೆ. ಹೌದೆ, ದಾಸರೆ?

ಕನಕಣ್ಣ : ಹೌದು ಅಣ್ಣನವರೆ. ನನ್ನೊಡನೆ ನಮ್ಮ ಗುರುಗಳೂ ಕಾಗಿನೆಲೆಯಲ್ಲಿ ನಿಂತರು. ಆರು ತಿಂಗಳಿದ್ದು ಪರಮಪದ ಸೇರಿದರು. ಆ ಸಮಯದಲ್ಲಿ ನನಗೆ ಇಲ್ಲಿ ಆಶ್ರಯ ಪಡೆಯಬೇಕೆಂದು ಬೆಸಸಿದರು. ಬರುವ ಯೋಚನೆಯಲ್ಲಿ ಕೆಲವು ಕಾಲ ಕಳೆಯಿತು. ಕೊನೆಗೆ ದೇವರು, ಹೊರಡು ಇನ್ನು ತಡಮಾಡಬೇಡ, ಎಂದು ಒಳಗಿಂದ ಅಪ್ಪಣೆ ಮಾಡಿದರು. ಆ ಅಪ್ಪಣೆ ಆದದ್ದೆ ಊರಿಗೆ ಸುದ್ದಿ ಕಳುಹಿಸಿದವನು ಇತ್ತ ಹೊರಟುಬಂದೆ. ದೇವಕೃಪೆಯಿಂದ ಇಂದು ನೆಲೆಯನ್ನು ಮುಟ್ಟಿದೆ.

ಪುರಂದರದಾಸ : ವಿಜಯನಗರಕ್ಕೆ ಬಂದಿರಿ. ಸ್ವಾಮಿಗಳು ಇಲ್ಲಿ ಬಿಜಮಾಡಿರುವುದು ತಿಳಿದು ಇಲ್ಲಿಗೆ ಬಂದಿರಿ.

ಕನಕಣ್ಣ : ಹೌದು, ಅಣ್ಣಾ ಅವರೆ.

ವ್ಯಾಸರಾಯ : ನಿಮ್ಮ ಗುರುಗಳು ಯಾರು? ನಾವು ಬಲ್ಲ ಹಿರಿಯರೊ?

ಕನಕಣ್ಣ : ಇರಲಾರದು ಪ್ರಭು. ಅವರು ಬಾಡವನ್ನು ಬಿಟ್ಟು, ಹೊರಕ್ಕೆ ಬಂದವರಲ್ಲ. ನಾನು ಕಾಗಿನೆಲೆಯಲ್ಲಿ ನಿಂತೆ ಎಂತ ಕಾಗಿನೆಲೆಗೆ ಬಂದು ನಿಂತರು. ಇಲ್ಲದಿದ್ದರೆ ಅಲ್ಲಿಗೂ ಬಂದಿರಲಾರರು.

ವ್ಯಾಸರಾಯ : ಅವರ ಹೆಸರೇನು?

ಕನಕಣ್ಣ : ರಾಮಾನುಜ ಗುರು. ಹಿರಿಯ ತಾತಾಚಾರ್ಯರ ವಂಶದವರು.

ವ್ಯಾಸರಾಯ : ಓಹೋ, ಅವರೇ? ನಾವು ಲಕ್ಷ್ಮಣಾಚಾರ್ಯರನ್ನು ನೋಡಿದ್ದೆವು. ಅವರ ನಾಡ ಪ್ರಭು ಬೀರಪ್ಪನವರ ಗುರುಗಳಾಗಿದ್ದರು.

ಕನಕಣ್ಣ : ಹೌದು ಪ್ರಭು. ಈ ನಿಮ್ಮ ಆಶ್ರಿತ ಬೀರಪ್ಪನವರ ಒಬ್ಬನೆ ಮಗ. ರಾಮಾನುಜ ಗುರು, ಲಕ್ಷ್ಮಣ ಗುರುಗಳ ಒಬ್ಬರೆ ಮಗ.

ವ್ಯಾಸರಾಯ : ಹಾಗೇಯೆ? ತುಂಬ ಸಂತೋಷ. ಈ ದಿನ ನಮಗೆ ಏನೋ ಭಾಗ್ಯ ಲಭಿಸುವ ಚಿಹ್ನೆ ಕಂಡಿತೆಂದು ನಾವು ದಾಸರಾಯರಿಗೆ ಹೇಳಿದೆವು. ಆ ನಿರೀಕ್ಷೆ ಫಲಿಸಿತು.

ಕನಕಣ್ಣ : ಆ ನಿರೀಕ್ಷೆಯಲ್ಲಿ ನನ್ನ ಉದ್ಧಾರವೂ ಸೇರಿರಲಿ ಮಹಾಪ್ರಭು.

ವ್ಯಾಸರಾಯ : ನಿಮ್ಮ ವಿಷಯ ನೋಡಿದರೆ ಆ ಉದ್ಧಾರ ಈಗಾಗಲೇ ಆಗಿದೆ ಯೆಂಬಂತೆ ಇದೆ. ಒಳಗಿಂದ ಅಪ್ಪಣೆ ಆಯಿತು ಎಂದಿರಲ್ಲ. ಉದ್ಧಾರ ವಾಗದೆ ಆ ಘಟ್ಟಕ್ಕೆ ಬರುವುದಿಲ್ಲ.

ಕನಕಣ್ಣ : ಅಪ್ಪಣೆ ಆದದ್ದು ಈ ಸಾನ್ನಿಧ್ಯವನ್ನು ಸಾರು ಎಂದು. ಆದ್ದರಿಂದ ಇಲ್ಲಿ ಈ ಚೇತನಕ್ಕೆ ದೊರೆಯಬೇಕಾದ ಪೋಷಣೆ ಇದೆ.

ವ್ಯಾಸರಾಯ : ಇದೆಯಾದರೆ ಅದು ನಿಮಗೆ ದೊರಕಲಿ, ಪ್ರಭು ಕನಕಣ್ಣ. ನಮಗೇನೊ ನೀವು ಒಬ್ಬ ಹಿರಿಯರಾಗಿ ಕಾಣುತ್ತಿದೀರಿ ಹೊರತು ಬೇರೆ ಹೇಗೇ ಆಗಲಿ ಕಾಣುತ್ತಿಲ್ಲ.

ಪುರಂದರದಾಸ : ಮಗುವಿನ ಬಾಯಲ್ಲಿ ಮೂರು ಲೋಕವನ್ನು ಕಂಡ ತಾಯಂತೆ ಗುರುಸನ್ನಿಧಾನ ಕನಕಣ್ಣನವರಲ್ಲಿ ಮಹಾಸತ್ವವನ್ನು ಕಾಣು ತ್ತಿರೋಣಾಗಿದೆ. ಬಾಯಲ್ಲಿ ಮೂರು ಲೋಕವನ್ನು ತೋರಿಸಿದ ಮೇಲೂ ಮಗು ಮಗುವೆ. ಅಡಿಗಳ ಆಶ್ರಯವನ್ನು ಬೇಡಿ ಬಂದಿರುವ ಮಗುವನ್ನು ಗುರುಸನ್ನಿಧಾನ ಅಂಗೀಕರಿಸೋಣಾಗಲಿ.

ಕನಕಣ್ಣ : ಮಗು ದಿಟ, ಮಹಾ ಪ್ರಭು. ಅದೂ ಏನು, ಅಂಬೆಗಾಲಿಡುವ ಮಗು ಕೂಡ ಅಲ್ಲ. ನೆಲದಮೇಲೆ ತೆವಳಿ ಬಂದಿರುವ ಮಗು. ನಾನು ಹಿರಿಯನು ಅಲ್ಲ ಅಷ್ಟೇ ಅಲ್ಲ. ಹಿರಿತನ ಏನು ಅದನ್ನು ಸಹ ಬಲ್ಲವನಲ್ಲ. ಎದುರಿಗಿರುವುದು ತಾಯ ಪಾದ ಎಂದಷ್ಟೆ ಬಲ್ಲ ಒಂದು ಹಸುಮಗು. ತೆವಳಿಕೊಂಡು ಬಂದು ಕಾಲಮೇಲೆ ಬಿದ್ದಿದೇನೆ. ಎತ್ತಿಕೊಳ್ಳಿರಿ. ಉದ್ಧಾರ ಮಾಡಿರಿ. (ಎಂದು ದೀರ್ಘದಂಡ ನಮಸ್ಕಾರ ಮಾಡುತ್ತಾನೆ)

ವ್ಯಾಸರಾಯ : (ಅವನನ್ನು ಹಿಡಿದು ಎತ್ತಿ ನಿಲ್ಲಿಸಿ) ನಾರಾಯಣ ನಾರಾಯಣ. ಶುಭಮಸ್ತು. ಶ್ರೀಕೃಷ್ಣ ನಿಮ್ಮನ್ನು ರಕ್ಷಿಸಿಕೊಳ್ಳಲಿ. ನಿಮ್ಮೊಡನೆ ನಮ್ಮೆಲ್ಲರನ್ನೂ ರಕ್ಷಿಸಲಿ.

## ಸ್ಥಾನ : ೩

ವ್ಯಾಸ ಸಮುದ್ರದ ಬಳಿ ಆಶ್ರಮದ ಮಂಟಪದಲ್ಲಿ ವ್ಯಾಸರಾಯ, ಪುರಂದರದಾಸ.

ವ್ಯಾಸರಾಯ : ಕನಕಣ್ಣ ಬರಲಿಲ್ಲವೋ ?

ಪುರಂದರದಾಸ : ಇಲ್ಲ. ಮತ್ತೆ ಹೇಳಿಕಳುಹಿಸಿದೇನೆ.

ವ್ಯಾಸರಾಯ : ಕೆಲಸ ನೋಡಿಕೊಳ್ಳುತ್ತೇನೆ ಎಂತ ಹೀಗೆ ಸೊರಗಬೇಕಾದದ್ದಿಲ್ಲ.

ಪುರಂದರದಾಸ : ಇದು ಇಂಥ ಜನರ ಸ್ವಭಾವ. ನಮ್ಮ ಚಕ್ರವರ್ತಿಗಳು ಇದೇ ತೆರನ ಮನುಷ್ಯರು. ಯಾವುದನ್ನು ಹಿಡಿದರೂ ಮುಗಿಸುವವರೆಗೂ ಒಂದೇ ಹಠ. ಕ್ಷಮಿಸುವುದಾದರೆ. . .

ವ್ಯಾಸರಾಯ : ನಾವೂ ಇದೇ ತೆರ ಎನ್ನುತೀರಿ.

ಪುರಂದರದಾಸ : ಹೌದು, ಸನ್ನಿಧಾನ ಮನ್ನಿಸಬೇಕು.

ವ್ಯಾಸರಾಯ : ತಪ್ಪು ಮಾತಲ್ಲವಲ್ಲ. ದಿಟದಲ್ಲಿ ನೀವೂ ಇದೇ ತೆರ.

ಪುರಂದರದಾಸ : ಇರಬಹುದು.

ವ್ಯಾಸರಾಯ : ಎಂದರೆ ಒಂದು. ಕನಕಣ್ಣ ಬರದೇ ಇದ್ದಿದ್ದರೆ ಈ ತೂಬಿನ ಕೆಲಸ ಆಗುತ್ತಿರಲಿಲ್ಲ.

ಪುರಂದರದಾಸ : ಹೌದು. ಕೋಣ, ಚಾಣ, ಹಗ್ಗ, ಜನ ಎಂತ ಏನೇನೊ ಮಾಡಿ ಆ ಬಂಡೆಯನ್ನ ಎತ್ತಿಸಿದ್ದರಿಂದ ತೂಬು ಒಂದು ಎಂತ ಆಯ್ತು. ಕಾಗಿನೆಲೇಲಿ ಕೆಲಸ ಮಾಡಿಸುತಿರಬೇಕಾದರೆ ಇಂಥದೇ ತೊಂದರೆ ಬಂದಿತಂತೆ. ಇಂಥ ಸಮಯದಲ್ಲಿ ಏನು ಮಾಡಬೇಕು, ಅದನ್ನ ಅಲ್ಲಿ ಕಲಿಸಿ ದೇವರು ತನ್ನನ್ನ ಇಲ್ಲಿಗೆ ಈ ಕೆಲಸಕ್ಕಾಗಿ ಕರೆತಂದರು ಎಂತ ಅವರು ಹೇಳಿದರು.

ವ್ಯಾಸರಾಯ : ಈ ನಿಷ್ಠೆಗೆ ಸಮನಿಲ್ಲ. ಇದು ಏನು ಭಕ್ತಿ, ಏನು ಶ್ರದ್ಧೆ !

ಪುರಂದರದಾಸ : ಇವರು ಎಲ್ಲ ಕ್ಷಣವೂ ಒಳಗಿಂದ ಪ್ರೇರಣೆ ಬೇಡತಾರೆ. ನಾನು ಕೇಳಿದೆ. ಹೌದು ಎಂದರು.

ವ್ಯಾಸರಾಯ : ಒಳಗಿಂದ ಧ್ವನಿಯೇ ಕೇಳುತ್ತೆ ಎಂದರಲ್ಲ.

ಪುರಂದರದಾಸ : ಹೌದಂತೆ. ಹೊರಗಿಂದ ನಾವು ಯಾರಾದರೂ ಆಡಿದ ಮಾತು ಹೇಗೆ ಹಾಗೆ ಒಳಗಿಂದ ಆಡಿದ ಮಾತು ಕೇಳುತ್ತದಂತೆ. ಇಷ್ಟೇ ಅಲ್ಲ, ಎಂದರೆ ಇದಕ್ಕಿಂತ ಹೆಚ್ಚು ಸ್ಪಷ್ಟ.

ವ್ಯಾಸರಾಯ : ತುಂಬ ಪಕ್ವವಾದ ಜೀವ.

ಪುರಂದರದಾಸ : ದಿಟ.

ವ್ಯಾಸರಾಯ : ಮಗುವಾಗಿದ್ದ ದಿನದಿಂದ ರಾಮಾಯಣ ಭಾರತ ಭಾಗವತ ಎಂತ ಕೇಳಿ ಕೇಳಿ ಎಲ್ಲಾ ಕಂಠಪಾಠವೋ ಎನ್ನೋ ಹಾಗೆ ಮಂದಟ್ಟಾಗಿದೆ.

ಪುರಂದರದಾಸ : ಕಂಠಪಾಠವೇ ಆಗಿದೆ. ಆದರೆ ಬಾಯಲ್ಲಿ ಹೇಳೋದಿಲ್ಲ. "ಒಂದಕ್ಷರ ತಪ್ಪಿದರೂ ಅಪರಾಧ ಆಗುತ್ತೆ. ಸಂತೆ ಹೇಳಿ ಕಲಿತದ್ದಲ್ಲ. ನಾನು ಹೇಳಿ ಆಗಬೇಕಾದ್ದೇನು?" ಎನ್ನುತ್ತಾರೆ. ತುಂಬಾ ಜ್ಞಾನ; ತುಂಬ ವಿನಯ.

ವ್ಯಾಸರಾಯ : ಜ್ಞಾನ ತುಂಬಾ ಆದ್ದರಿಂದಲೇ ವಿನಯ ತುಂಬಾ ಆಗಿದೆ.

ಪುರಂದರದಾಸ : ಜ್ಞಾನಕ್ಕೆ ಹುಟ್ಟು ಕಾರಣ ಅಲ್ಲ ಎಂತ ಸನ್ನಿಧಾನ ಅಪ್ಪಣೆ ಕೊಡಿಸೋ ಮಾತಿಗೆ ಕನಕಣ್ಣ ಪ್ರತ್ಯಕ್ಷ ಪ್ರಮಾಣ.

ವ್ಯಾಸರಾಯ : ವಿದುರ ಧರ್ಮವ್ಯಾಧ ಬರೀ ಕಥೆ ಜನ ಅಲ್ಲ ಅನ್ನೋದಕ್ಕೂ ಪ್ರಮಾಣವೇ. ಯಮೇವೈಷ ವೃಣುತೇ ತೇನ ಲಭ್ಯಃ.

(ಕನಕಣ್ಣ ಬರುತ್ತಾನೆ)

ಕನಕಣ್ಣ : ಗುರು ಸನ್ನಿಧಾನಕ್ಕೆ ನಮೋ ನಮಃ.

ವ್ಯಾಸರಾಯ : ಆರೋಗಣೆಗೆ ಬಹು ತಡ ಆಯ್ತಲ್ಲ. ಬರಬೇಕು ಕನಕಣ್ಣ. ಸ್ನಾನ ಆಗಿದೆ ಅಲ್ಲ?

ಕನಕಣ್ಣ : ಆಗಿದೆ ಮಹಾಸ್ವಾಮಿ.

ಪುರಂದರದಾಸ : ಮುಖದಲ್ಲಿ ತಿರುಮಣಿ ಕಾಣುತ್ತಿಲ್ಲ.

ವ್ಯಾಸರಾಯ : ಅದು ತಿರುಮಣ್. ಎಂದರೆ ಶ್ರೀಮೃತ್ತಿಕಾ. ಮಧ್ವರೇಖೆ ಶ್ರೀಚೂರ್ಣ. ತಮಿಳಲ್ಲಿ ಶ್ರೀಮೃತ್ತಿಕಾ ಎನ್ನೋದಕ್ಕೆ ತಿರುಮಣ್ ಎನ್ನುತ್ತಾರೆ. ಈ ಚಿಹ್ನೆ ಮುಖದ ಮೇಲೆ ಇದ್ದರೆ ಆಯಿತು ಅದನ್ನು ಧರಿಸುವ ಯಾವನೂ ಯಾವನಿಗೂ ದಂಡಪ್ರಣಾಮ ಮಾಡಬೇಕು.

ಕನಕಣ್ಣ : ಹೌದು ಮಹಾಸ್ವಾಮಿ.

ವ್ಯಾಸರಾಯ : ಒಳಗೆ ಹೋಗಿ; ಆರೋಗಣೆ ಆಗಲಿ.

(ಕನಕಣ್ಣ ನಮಸ್ಕಾರಮಾಡಿ ಒಳಗೆ ಹೋಗುತ್ತಾನೆ)

ಪುರಂದರದಾಸ : ಸ್ವಾಮಿ ಆರೋಗಣೆ ಅನ್ನೋದನ್ನ ಇದನ್ನ ಕನಕಣ್ಣ ತುಂಬ ಸುಲಭ ಮಾಡಿಕೊಂಡಿದಾರೆ.

ವ್ಯಾಸರಾಯ : ಹೇಗೆ ಎನ್ನುತೀರಿ?

ಪುರಂದರದಾಸ : ಎಲ್ಲರ ಊಟಾನೂ ಆಗಿಬಿಡಲಿ, ಆದಮೇಲೆ ಉಳಿದಿರೋ ಅನ್ನ ಎರಡು ತೆರಳೆ ಮಾಡಿ ಇರಿಸಿ, ನಾನು ಬಂದಾಗ ಕೊಡಿ, ಅಂತ ಅಡಿಗೆ ಭಟ್ಟರಿಗೆ ಹೇಳಿದಾರೆ. ಅದೇ ಈಗ ನಡೆಯುತಿರೋ ಏರ್ಪಾಟು.

ವ್ಯಾಸರಾಯ : ಸರಿ. ನಾವು ಏನೂ ಮಾಡೋ ಹಾಗಿಲ್ಲ. ಬಂದ ಮೂರನೆಯ ದಿನವೇ ಕನಕಣ್ಣ ಏಕಾಂತದಲ್ಲಿ ತನ್ನ ವಿಷಯ ನಾವು ಯೋಚನೆ ಮಾಡುವುದಾದರೆ ತಾನು ಇಲ್ಲಿ ನಿಲ್ಲುವುದು ತಪ್ಪಾಗುತ್ತದೆ, ತನ್ನನ್ನು ತನ್ನ ಇಷ್ಟದಂತೆ ಇರೋಕೆ ಬಿಡಬೇಕು, ಎಂತ ಬೇಡಿದರು. ನಾವು ಆಗಲಿ ಎಂತ ಮಾತು ಕೊಟ್ಟೆವು. ಈಗ ಇದನ್ನ ವಿಚಾರಿಸಿ ಹೀಗೆ ಬೇಡ ಎಂದರೆ ನಾಳೆ ತಾವು ಹೊರಡೋಕೆ ಅಪ್ಪಣೆ ಕೇಳುತಾರೆ.

ಪುರಂದರದಾಸ : ಕೇಳುತಾರೆ.

ವ್ಯಾಸರಾಯ : ಹೌದಲ್ಲ? ತಾವು ಇದನ್ನ ಬಲ್ಲಿರಿ.

ಪುರಂದರದಾಸ : ನಾನು ಅವರನ್ನ ಈ ಮಾತು ಕೇಳಿದೆ. ಅವರು ಹಾಗಂತಲೇ ಹೇಳಿದರು. ತಾವು ಇಲ್ಲಿ ಗುಹ, ಗುಹನಂತೆ ನಡಕೊಳ್ಳಬೇಕು, ಎಂದರು.

ತನ್ನ ಹುಟ್ಟು ಬೇರೆ. ಗುರುಗಳ ಆಚಾರ ನಡೆಯಬೇಕು. ಗುರುಗಳಿಗಿಂತ ಹೆಚ್ಚಾಗಿ ಅವರ ಬಳಿ ಇರುವ ಜನರ ಆಚಾರಕ್ಕೆ ಕೊರೆ ಬರಬಾರದು. ತನ್ನಿಂದ ಕೊರೆ ಬಂತು ಅನ್ನೋದು ಕೂಡದು. ಆದ್ದರಿಂದ ಸಾವಿರ ಸಂಗತೀಲಿ ಜೊತೆಗಿರುತಾ ಈ ಒಂದು ಸಂಗತೀಲಿ ದೂರ ಇದ್ದು ಬಿಡೋದು ವಿವೇಕ ಎಂದರು.

ವ್ಯಾಸರಾಯ : ಏನು ಅಪೂರ್ವದ ಸ್ವಭಾವ! ಎಂಥಾ ದೊಡ್ಡತನ!

(ಕನಕಣ್ಣ ಬರುತ್ತಾನೆ)

ಇಷ್ಟು ಬೇಗ ಮುಗೀತೆ ಆರೋಗಣೆ, ಕನಕಣ್ಣ?

ಕನಕಣ್ಣ : ನಾನು ಇದನ್ನ ಆರೋಗಣೆ ಅಂತ ಇಟ್ಟುಕೊಂಡಿಲ್ಲ. ಪ್ರಸಾದ ಸ್ವೀಕಾರ ಅಂತ ಮಾಡಿಕೊಂಡಿದ್ದೇನೆ, ಮಹಾಸ್ವಾಮಿ.

ವ್ಯಾಸರಾಯ : ಆದ್ದರಿಂದ ಬೇಗ ಮುಗಿಯುತ್ತೆ.

ಕನಕಣ್ಣ : ಪ್ರಭುವಾಗಿದ್ದಾಗ ಆರೋಗಣೆ, ಊಟದಲ್ಲಿ ಸುಖ. ದಾಸನಾದ ಮೇಲೆ ಪ್ರಸಾದ ಸ್ವೀಕಾರ. ಮೈ ಇರೋಕೆ ಎಷ್ಟು ಬೇಕು ಅಷ್ಟು ಆಹಾರ; ಹಿರಿಯರು ಉಂಡು ಉಳಿದದ್ದು. ಕಾಗಿನೆಲೆಗೆ ಬಂದದ್ದು ಮೊದಲು ಇದೇ ಪದ್ಧತಿ.

ಪುರಂದರದಾಸ : ಪ್ರಭುವಾಗಿದ್ದಾಗ ಆರೋಗಣೆ, ದಾಸನಾದ ಮೇಲೆ ದೇಹ ಧಾರಣೆ.

ವ್ಯಾಸರಾಯ : ಸಂತೋಷ ಕನಕಣ್ಣ. ನಿಮ್ಮ ಭಾವನೆ ದೊಡ್ಡದು. ನಿಮ್ಮ ಸಾಧನೆ ದೊಡ್ಡದು. ನಿಮಗೆ ನಾವು ಏನೂ ಹೇಳಬೇಕಾಗಿಲ್ಲ. ನೀವು ಕಂಡಿರೋ ದಾರೀಲಿ ಹೀಗೆಯೇ ಮುಂದರಿಯಿರಿ.

ಕನಕಣ್ಣ : ಗುರುಗಳ ಆಶೀರ್ವಾದ.

ಪುರಂದರದಾಸ : ಈ ಹೊತ್ತು ಕೆಲಸ ಮುಗಿಯುತ್ತೆ ಅಂದಿದ್ದಿರಿ ಕನಕಣ್ಣ. ಮುಗಿದ ಹಾಗೋ?

ಕನಕಣ್ಣ : ಮುಗಿದ ಹಾಗೆ. ಸ್ವಾಮಿಗಳು ಇನ್ನು ಇಲ್ಲೀ ಇರಬೇಕಾದ ಕೆಲಸ ಇಲ್ಲ. ನಾಳೆ ನಗರಕ್ಕೆ ಅಂತ ಬಿಜಮಾಡಬಹುದು.

ಪುರಂದರದಾಸ : ಒಳ್ಳೇದಾಯಿತು. ಪ್ರಭುಗಳ ದೇಹಸ್ಥಿತಿ ಸರಿಯಾಗಿಲ್ಲ ಎಂತ ಸುದ್ದಿ ಬಂತು. ಸ್ವಾಮಿ ಪ್ರಯಾಣ ಬೆಳೆಸಬಹುದು.

ವ್ಯಾಸರಾಯ : ಹೌದು. ಸುದ್ದಿ ಕಳುಹಿಸುವ ಮಟ್ಟಿಗೆ ಆರೋಗ್ಯ ಕೆಟ್ಟಿದೆ ಯೆನ್ನೋದು ಕಳವಳಕ್ಕೆ ಕಾರಣವಾಗಿದೆ. ನಾಳೆ ಹೊರಡೋಣ.

## ಸ್ಥಾನ : ೪

ವಿಜಯನಗರದಲ್ಲಿ ವ್ಯಾಸರಾಯರ ಮಠದ ಮುಂಭಾಗ.
ಕೈಸಾಲೆಯಲ್ಲಿ ವ್ಯಾಸರಾಯ.

(ಪ್ರಾಯದ ಹೆಂಗಸು ಒಬ್ಬಾಕೆ, ಒಬ್ಬ ತರುಣ ಬರುತ್ತಾರೆ.)

ತರುಣ : ಅಡ್ಡಬಿದ್ದೆ, ಸ್ವಾಮಿಗಳೆ (ಎಂದು ದೂರದಲ್ಲಿ ಸಾಷ್ಟಾಂಗ ಪ್ರಣಾಮ ಮಾಡುತ್ತಾನೆ; ಸ್ತ್ರೀ ಮಂಡಿಯೂರಿ ನಮಸ್ಕಾರ ಮಾಡುತ್ತಾಳೆ)

ವ್ಯಾಸರಾಯ : ಶುಭಮಸ್ತು ; ಏಳಿ. (ಅವರು ಏಳುತ್ತಾರೆ) ಯಾರು ನೀವು?

ತರುಣ : ತಿಂಗಳ ಹಿಂದೆ ನಿಮ್ಮ ತಾವಕೆ ಬಂದರಲ್ಲ ಆ ಕನಕಣ್ಣ ಪ್ರಭುಗಳ ಮಗ ಸ್ವಾಮಿ ನಾನು. ಇವರು ನಮ್ಮ ತಾಯಿ.

ವ್ಯಾಸರಾಯ : ಕುಳಿತುಕೊಳ್ಳಿ, ಕುಳಿತುಕೊಳ್ಳಿ. (ಅವರು ಕುಳ್ಳಿರುತ್ತಾರೆ) ಏನಪ್ಪಾ ತಾಯಿಯೊಂದಿಗೆ ನಗರಕ್ಕೆ ಬಂದಿರಿ? ತಂದೆಯವರನ್ನ ನೋಡೋಕೆ ಎಂತಲೇ? ದೊರೆಗಳನ್ನ ಕಾಣೋ ಕೆಲಸ ಇತ್ತೇ?

ತರುಣ : ದೊರೆಗಳನ್ನು ಕಾಣೋ ಕೆಲಸ ನಾವು ಇರಿಸಿಕೊಳ್ಳೋದಿಲ್ಲ, ಸ್ವಾಮಿಗಳೆ. ಕೊಡೋ ಹೊನ್ನು ಅನ್ನೋದನ್ನ ಕಾಣಿ ಉಳಿಸಿಕೊಳ್ಳದೆ ಸಂದಾಯ ಮಾಡಿರುತ್ತೆ. ಅವರು ನಮ್ಮನ್ನ ಎಲ್ಲಿ ಅನ್ನೋಲ್ಲ. ನಾವು ಅವರನ್ನು ಎತ್ತ ಅನ್ನೋಲ್ಲ.

ವ್ಯಾಸರಾಯ : ಹೌದೊ ?

ತರುಣ : ಅಷ್ಟೇ ಬುದ್ಧಿಗಳೆ.

ವ್ಯಾಸರಾಯ : ನಿಮ್ಮ ತಂದೆ ಇತ್ತಲಾಗಿ ಬರೋ ಮಾತನ್ನ ನಿಮಗೆ ಹೇಳಿ ಕಳುಹಿಸಿದ್ದರಲ್ಲ.

ತಾಯಿ : ಸುದ್ದಿ ಕಳುಹಿಸಿದರು ಸ್ವಾಮಿ. ತಮ್ಮ ತಾವಕೆ ಅಂತ ಹೊರಟಿದೇವಿ ಅಂತಲೇ ಹೇಳಿ ಕಳುಹಿಸಿದರು. ಅದ ಕೇಳಿ ನಮ್ಮ ಮಗ ತಮ್ಮನ್ನ ಕಾಣ ಬೇಕು ಅಂತ ಇತ್ತಲಾಗಿ ಬರಬೇಂಕದ.

ವ್ಯಾಸರಾಯ : ನನ್ನನ್ನ ತಾಯಿ ?



ತಾಯಿ : (ಮಗನನ್ನು ಮುಟ್ಟಿ) ಅರಿಕೆ ಮಾಡು.

ತರುಣ : ಹೌದು ದೇವರೆ (ಎಂದು ಸುಮ್ಮನಾಗುತ್ತಾನೆ)

ವ್ಯಾಸರಾಯ : ಸಂಗತಿ ಏನು ಹೇಳಿರಲ್ಲ.

ತರುಣ : ನೀವೇ ಹೇಳಿ ಅವ್ವ.

ತಾಯಿ : ಕಾಗಿನೆಲೆ ಗುಡಿ ಕಟ್ಟಿಸಿದ್ದೇ ಇವರ ತಂದೆ ಒಂದು ತೀರು ಆದರು ಮಹಾಸ್ವಾಮಿ. ಅವರಿಗೆ ಈ ಪ್ರಪಂಚದ ಚಪಲ ಅನ್ನೋದು ತೀರ ಹರಿದು ಹೋಯಿತು. ನಾಡ ಆಡಳಿತ ಮಗನ ಮೇಲೆ ಹೇರಿ ತಾವು ಹೊರಚ್ಚಾಗಿ ನಿಂತುಬಿಟ್ಟರು. ಇದೊ ಹಸುಮೊಗ; ತನ್ನದು ಅನ್ನೋ ಹೆಣ್ಣು ಬಂದಿಲ್ಲ. ನಾನು ಗಂಡನನ್ನ ನೋಡಲಾ ಮಗನ್ನ ನೋಡಲಾ. ಮಗನ ಮಾತು ನಂಟರ ಕೈಯಾಗಿಟ್ಟು ಗಂಡನ್ನ ನೋಡಿಕೊಂಬೋದು ಅಂದೆ. ಗುಡಿ ಆಪಾರದಲ್ಲಿ ಒಂದು ಗುಡಿಸಲಲ್ಲಿ ಬಾಳು. ಎರಡು ವರ್ಷ ಆಯ್ತು. ಮಗನ ತಾವ ಹೋಗಿ ಬರೋಣ ಅನ್ನಿಸಿತು. ಹೋದೆ. ವಾರ ಇಲ್ಲ ಈ ಸುದ್ದಿ ಬಂತು.

ವ್ಯಾಸರಾಯ : ಕನಕಣ್ಣ ಸಾಮಾನ್ಯ ಮನುಷ್ಯನಲ್ಲ, ತಾಯಿ. ದೇವರ ಸ್ವಂತ ಮಗು. ಚಿಂತೆ ಬೇಡ.

ತಾಯಿ : ಅವರನ್ನ ಕುರಿತು ಚಿಂತೆ ಇಲ್ಲ, ದೇವರೆ. ಅವರು ದೇವರ ಮಗು ಬಿಟ್ಟೆ. ದೇವರು ಅವರೊಂದಿಗೆ ಮಾತನಾಡುತಾರೆ. ಆಟ ಆಡುತಾರೆ. ನಾ ಬಲ್ಲೆ. ಚಿಂತೆ ಎಲ್ಲಾ ಈ ಮಗನನ್ನ ಕುರಿತು. ಅವರೇನು, ಹುಟ್ಟುತ್ತಾ ದೇವರ ಸೊತ್ತು ಅಂತ ಹುಟ್ಟಿದರು. ಬೆಳೆಯುತಾ ದೇವರೇ ಆಸ್ತಿ ಅಂದರು. ನಮ್ಮ ಮಾವನೋರು ಅತ್ತೆಯೋರು ಒಬ್ಬ ಮಗನ್ನ ಹೆತ್ತು ಕಳಕೊಂಡು ಬಹಳ ದಿನ ಮಕ್ಕಳಿಲ್ಲದಿದ್ದರು. ಒಂದು ಸಲ ತಿರುಪತಿಗೆ ಹೋಗಿ ಹರಕೆಮಾಡಿಕೊಂಡರು. ಆ ವರ್ಷ ಈ ಮಗ ಹುಟ್ಟಿದರು. ಅದಕಂತಲೇ ಹೆಸರು ತಿಮ್ಮಪ್ಪನದು. ಅಪ್ಪ ಅಮ್ಮ ಹನ್ನೆರಡು ವರ್ಷದಲ್ಲಿ ತೀರಿಕೊಳ್ಳದೇ ಇದ್ದರೆ ಇವರು ನಾಡಿಗೆ ಧಣಿಯಾಗಿ ದಕ್ಕುತಿರಲಿಲ್ಲ. ಅಷ್ಟು ಧ್ಯಾನ, ಅಷ್ಟು ಜ್ಞಾನ ಇವರದು. ಮದಿವೆ ಆಗಿ ಈ ಮಗ ಆದ. ಇವನ ತಾಯಿ ತೀರಿಕೊಂಡಳು. ಯಾವುದೂ ಇವರಿಗೆ ಅಂತಾ ಪರಿವೇ ಇಲ್ಲ. ಆ ಹೆಂಡತಿ ತಂಗಿ ನಾನು. ನಮ್ಮಪ್ಪ, ಅಮ್ಮ, ತಬ್ಬಲಿ ಮಗು. ನೋಡಿಕೊ ಹೋಗು, ಅಂತ ನನ್ನ ಇವರ ಹತ್ತಿರ ಕರತಂದರು, ಮದಿವೆ ಆಗಂದರು. ಇವರು ಆಗಲಿ ಅಂದರು. ನನಗೂ ಒಂದು ಯೋಗ ಆಯಿತು. ತೀರಿಕೊಂಡಿತು. ಬಂಜೆ ಅನ್ನೋ ಭಂಗ ಇಲ್ಲದ ಹಂಗೆಮಾಡಿ ಮಲತಾಯಿ ಅನ್ನೋ ಹರಲಿ ಇಲ್ಲದ ಹಂಗೆ ಮಾಡಿತು. ನಾ ಬೇರೆ ಏನೂ ಬಯಸಲಿಲ್ಲ ಬಿಡಿ. ದೇವರು ಕೊಟ್ಟದ್ದು ಸಾಕು. ನನ್ನದೇನು ನನ್ನಕ್ಕನದೇನು ಅಂದೆ. ಸಂತೋಷವಾಗಿ ಇದ್ದುಬಿಟ್ಟೆ. ಇರುತಾ ಇರುತಾ ಇವರಿಗೆ ಏನು ಬುದ್ಧಿ. . . (ಎಂದು ಮಾತು ನಿಲ್ಲಿಸಿ ಕಣ್ಣೊರಸಿಕೊಳ್ಳುತ್ತಾಳೆ)

ವ್ಯಾಸರಾಯ : ಕನಕಣ್ಣ ನಿಮ್ಮನ್ನ ಮಗನ್ನ ಬಿಟ್ಟಿಲ್ಲ ತಾಯಿ. ಅಳುವುದು ಬೇಡ. ಅಳುವಿಗೆ ಕಾರಣವೇ ಇಲ್ಲ. ಸಮಾಧಾನವಾಗಿರಿ.

ಮಗ : ನಮ್ಮಪ್ಪಾಜಿ ಮಾತು ಇಂತು ಅನ್ನೋ ಅಂತಿಲ್ಲ, ಸ್ವಾಮಿಗಳೆ. ಅದರಿಂದ ನಮ್ಮವ್ವಗೆ ಭಯ.

ವ್ಯಾಸರಾಯ : ದೇವರು ನಡೆಸಿದಂತೆ ನಡೆಯೋ ಮನುಷ್ಯನ ಮಾತಿಗೆ ಭಯ ಏಕೆ ಅಣ್ಣಯ್ಯ?

ತಾಯಿ : ದೇವರು ನಡಸೋದು ದಿಟ ಅನ್ನಿರಿ. ಅವರಿಗೆ ದೇವರು ಆಡೋ ಮಾತು ಕೇಳಿಸತದೆ. ಚಿಕ್ಕಂದಿನಿಂದ ಹಂಗೇನೆ. ತಿರುಪತಿ ದೇವರ ಹೆಸರಿತ್ತಲ್ಲ. ಒಂದು ದಿನ ಕನಕ ಕನಕ ಅಂತ ಕರದ ಹಂಗಾಯ್ತು. ಅಂದಿನಿಂದ ಕನಕ ಅಂತ ಕರಕೊಂಡರು. ಇಂತಾ ತಾವು ಹಣವಿನ ಕೊಪ್ಪರಿಗೆ ಅಂತ ಹೇಳಿದ ಹಂಗಾಯ್ತು. ಅಲ್ಲಿ ನೋಡಿದರೆ ಹಣ ಇತ್ತು. ಕಾಗಿನೆಲೇಲಿ ನನ್ನ ಮನೆ ಚೆನ್ನಮಾಡು ಅಂದದ್ದು ಕೇಳಿಸಿತು. ಗುಡಿ ಕಟ್ಟಿಸಿದರು. ದೇವರ ದನೀನೇ ; ಅಡ್ಡಿ ಇಲ್ಲ.

ವ್ಯಾಸರಾಯ : ದೇವರು ಇವರ ಜೊತೆಗೆ ಆಡುತಾರೆ ಅಂತಲೂ ಅಂದಿರಲ್ಲ ತಾಯಿ.

ತಾಯಿ : ಹೌದು. ಅಜ್ಜಾ, ಇದು ನಾ ಕಣ್ಣಾರ ನೋಡಿರೋದು.

ವ್ಯಾಸರಾಯ : ಏನು ಹೇಳಿ ?

ತಾಯಿ : ವರ್ಷದ ಹಿಂದೆ. ಒಂದು ದಿನ ನಾ ನಮ್ಮ ಗುಡಿಸಲಲ್ಲಿ ರೊಟ್ಟಿ ಕಾಯಿಸುತ್ತಿದ್ದೆ. ನಾಲ್ಕು ರೊಟ್ಟಿ ಪಕ್ಕದಲ್ಲಿತ್ತು. ಒಂದು ಆಗುತಿತ್ತು. ಇವರು ಒಂದು ಪಕ್ಕಕ್ಕೆ ಕುಳಿತಿದ್ದರು. ಒಂದು ನಾಯಿ ಬಂತು, ನಾನೋಡಲಿಲ್ಲ. ಮೆಲ್ಲಗೆ ರೊಟ್ಟಿ ಹತ್ತಿರ ಬಂದಿದೆ. ಇವರು ನೋಡತಾ ಇದಾರೆ. ಅದು ಒಂದು ರೊಟ್ಟೀನ ಕಚ್ಚಿಕೊಂಡು ಹೊರಟೇಬಿಟ್ಟಿತು. ಇವರು ನಕ್ಕರು. ಏನು ಅಂತ ತಿರುಗಿ ನೋಡಿದೆ. ತಿಳೀತು. ನಾಯಿ ರೊಟ್ಟೀ ತಕೊಂಡರೆ ನಗತಾ ಸುಮ್ಮನಿದೀರಾ ಅಂದೆ. ಹೌದಲ್ಲಾ ಬರೀ ರೊಟ್ಟಿ ಹೆಂಗೆ ತಿಂದಾತು ಅಂದರು. ಪಕ್ಕದಲ್ಲಿದ್ದ ಬೆಲ್ಲ ತುಪ್ಪ ತಕೊಂಡು ಅದರ ಹಿಂದೆ ಓಡಿದರು. ಇದೇನು ತಲೆಗೇಡು ಅಂತ ನಾ ಹಿಂದೆ ಹೋದೆ. ಇವರು, ಅಪ್ಪಾ ನನ್ನ ದೇವರೇ ನನ್ನ ದೇವರೇ ನಿಲ್ಲು, ನಿಲ್ಲು. ಒಣ ರೊಟ್ಟಿಯಾಕೆ ತಿನ್ನುತೀ, ತುಪ್ಪಕೋ ಬೆಲ್ಲಕೊ, ಅಂತ ಕರೀತಾ ಅಟ್ಟುತಾ ಇದಾರೆ. ನಾಯಿ ಅಷ್ಟು ದೂರ ಓಡಿತು, ನಿಂತಿತು.

ವ್ಯಾಸರಾಯ : ನಿಂತಿತೇ ? ಅಟ್ಟಿಸಿಕೊಂಡು ಬರುತಾ ಇರೋ ಮನುಷ್ಯನ್ನ ನೋಡಿ ?

ಮಗ : ಹಂಗೆ ಕರೆಯೋವಾಗ ಅಪ್ಪಾಜಿಯವರ ದನಿ ಒಂದು ತೀರು ಇರುತದೆ ದೇವರೆ. ಅದನ್ನ ಕೇಳಿದ ಜಂತು ನೆಚ್ಚಿ ನಿಲ್ಲತವೆ.

ತಾಯಿ : ಹೌದು ನಿಂತಿತು. ಇವರು ಹತ್ತಿರ ಹೋದರು. ತುಪ್ಪ ಬೆಲ್ಲ ಹತ್ತಿರ ಇಟ್ಟರು. ನಾಯಿ ರೊಟ್ಟೀನ ಕೊರಕಿತು. ತುಪ್ಪ ನೆಕ್ಕಿತು. ಬೆಲ್ಲ ತಿಂತು, ಬಾಲ ಆಡಿಸುತಾ ಇವರತ್ತ ನೋಡುತಾ ಇತ್ತು. ಇವರು ನನ್ನ ದೇವರೇ ನನ್ನ ದೇವರೇ, ಅನ್ನತಾ ಇದ್ದಾರೆ. ಮೈಮೇಲೆ ಪರಿವೇ ಇಲ್ಲ. . . ನೋಡಿದರೆ ಆ ನಾಯಿ ಸುತ್ತಿ ಒಂದು ಬೆಳಕಿನ ಮೂರ್ತಿ. ತಿರುಪತಿ ತಿಮ್ಮಪ್ಪನೇ. ಶಂಕು, ಚಕ್ರ, ನಾಮ, ಹಾರ. ಅಪ್ಪಾ ಅಂದೆ. ನನಗೂ ಆ ಕ್ಷಣ ಮೈಮರವೇ. ತಿರುಗಿ ನೋಡಿದರೆ ಇವರು ತುಪ್ಪದಪಾತ್ರೆ ಹಿಡಿದುಕೊಂಡು ಬರುತಿದಾರೆ. ನಾಯಿ ಅತ್ತಲಾಗೆ ನಡೀತಾ ಇದೆ.

ವ್ಯಾಸರಾಯ : ನಾರಾಯಣ, ನಾರಾಯಣ.

ತಾಯಿ : ನಾರಾಯಣನೇ ಅಜ್ಜಾ. ಅವರ ಪುಣ್ಯದಿಂದ ನನಗೆ ದರ್ಶನ ದೊರೀತು.

ವ್ಯಾಸರಾಯ : ನಿಮ್ಮದೂ ಪುಣ್ಯ ತಾಯಿ.

ತಾಯಿ : ಹೌದನ್ನರಿ. ಇವರ ಕೈ ಹಿಡಿದ ಪುಣ್ಯ. ಅವರು ಹತ್ತಿರ ಬರುತ್ತಲೂ ಹಿಂಗೆ ಕಂಡಿತಂತ ಹೇಳಿದೆ. ಅವರು ನಕ್ಕರು. ತನಗೆ ನಾಯಿ ಅಷ್ಟೇ ಕಂಡಿತು ಬೇರೆ ಏನೂ ಕಾಣಲಿಲ್ಲ ಅಂದರು.

ವ್ಯಾಸರಾಯ : ಅದು ಆಶ್ಚರ್ಯ ಅಲ್ಲ?

ತಾಯಿ : ಹಂಗಂದರು.

ವ್ಯಾಸರಾಯ : ಇದು ಹೇಗೆ?

ತಾಯಿ : ನನಗೆ ತಿಳೀಲಿಲ್ಲ.

ವ್ಯಾಸರಾಯ : (ಒಂದು ಕ್ಷಣ ಯೋಚಿಸಿ) ಸರೀ ತಾನೇ. ನಿಮಗೆ ಅದು ದೇವರು ಅನ್ನಿಸಬೇಕಾದರೆ ಮೂರ್ತಿ ಕಾಣಬೇಕು. ಕನಕಣ್ಣನ ಕಣ್ಣಿಗೆ ನಾಯೇ ದೇವರಾಗಿ ಕಾಣತದೆ. ಬೇರೆ ಮೂರ್ತಿ ಏಕೆ?

ತಾಯಿ : ಹೌದನ್ನರಿ. ನನಗೆ ಇದು ತೋಚಲಿಲ್ಲ.

ವ್ಯಾಸರಾಯ : ಹೌದು, ಹೌದು. ಸರ್ವಭೂತನಿವಾಸೋಽಸಿ ಅನ್ನೋ ಮಾತು ಇವರಿಗೆ ತೀರ ದಿಟ.

ತಾಯಿ : ಇನ್ನೊಂದು ಸಲ ಗುಡಿಸಲ ಮೂಲೆಗೆ ಒಂದು ಹಾವು ಬಂತು. ನಾಗರು. ಇವರು, ಅಪ್ಪಾ ಅಲ್ಲೇ ಇರು, ಒಳಗೆ ಬಂದು ಭಯಬೀಳಿಸ ಬೇಡ, ನಿನಗೆ ಹಾಲು ಕೊಡುತೀನೆ, ಅಂದರು. ಅದು ಮೂರು ದಿನ ಇತ್ತು. ಹಾಲು ಒಪ್ಪಿಸಿದಿವಿ. ಕುಡೀತು. ನಡೀತು.

ವ್ಯಾಸರಾಯ : ತಾಯಿ ನೀವು ಪುಣ್ಯವಂತರು. ಇಂಥ ಗಂಡನ್ನ ಪಡೆದಿದೀರಿ. ಇದು ನಿಮ್ಮ ಪುಣ್ಯ. ನಿಮ್ಮಂಥಾ ಹೆಂಡತೀನ ಪಡೆದಿದಾರೆ ಕನಕಣ್ಣ, ಅದು ಅವರ ಪುಣ್ಯ. ರಾಮಚಂದ್ರ ಸೀತಾದೇವಿ ಅಂತೆ. ಕೃಷ್ಣದೇವರು ರುಕ್ಮಿಣಿ ಅಂತೆ. ನೀವು ಒಬ್ಬರಿಗೊಬ್ಬರು ಈಡಾಗಿದೀರಿ. ಹೀಗೆಯೇ ಈಡಾಗಿ ನೂರು ಕಾಲ ಸುಖವಾಗಿರಿ.

ತಾಯಿ : ಹಾಗಂತ ಹರಸಿ ಅಜ್ಜಾ. ಇವರು ನಮ್ಮನ್ನ ಬಿಡದ ಹಂಗೆ ನೋಡಿಕೊಳ್ಳಿ.

ವ್ಯಾಸರಾಯ : ಬಿಡೋ ಮಾತು ಕಾಣಲಿಲ್ಲ, ತಾಯಿ. ಬಿಡಬೇಕು ಏಕೆ? ವೈರಾಗ್ಯ ಮುಖ್ಯ ; ವೇಷ ಅಲ್ಲ. ಕನಕಣ್ಣ ಈಗಾಗಲೇ ಬೇಕಾದದ್ದನ್ನೆಲ್ಲ ಮಾಡಿ ಆಗಿದೆ. ಜೊತೆಗಿದ್ದೇ ಬಿಟ್ಟಿದಾರೆ. ದಾಸರಾಯರು ಹೇಳುವಂತೆ ತಾವರೇ ನೀರು, ಗೇರಿನ ಬೀಜ.

(ಸೇವಕ ಬರುತ್ತಾನೆ)

ಸ್ನಾನಕ್ಕೆ ಕರಕೊಂಡು ಹೋಗುತಿಯೇನೋ? ಬಂದೆ. ತಾಯಿ ಇಲ್ಲೇ ಇರಿ. ದಾಸರಾಯರು ಕನಕಣ್ಣ ಈ ಹೊತ್ತು ಜೊತೆಯಾಗಿ ಸಂಚಾರಕ್ಕೆ ಹೊರಟರು. ಇನ್ನೇನು ಬರುತ್ತಾರೆ. ಅವರನ್ನ ಕಾಣ ಬಹುದು.

(ಎಂದು ಏಳುತ್ತಾನೆ)

ತಾಯಿ : (ಅವನಿಗೆ ಮತ್ತೆ ಮಂಡಿಯೂರಿ ನಮಸ್ಕಾರ ಮಾಡಿ) ಅಷ್ಟನ್ನ ಮಾಡಿ ಕೊಡಿ ಅಜ್ಜಾ. ನನಗೆ ನನ್ನರಸನ್ನ, ಈ ಪೋರನಿಗೆ ಅಪ್ಪಾಜೀನ, ಉಳಿಸಿಕೊಡಿ.

ವ್ಯಾಸರಾಯ : ನಿಮಗೆ ದರ್ಶನ ನೀಡಿದ ನಿಮ್ಮಪ್ಪ ತಿಮ್ಮಪ್ಪ ಅವರನ್ನ ಉಳಿಸಿ ಕೊಟ್ಟಿದಾನೆ ತಾಯಿ. ಚಿಂತೆ ಬೇಡ. ನೀವು ಬೇಡಿದರೆ, ಅವನು ಬೇರೆಯುವರನ್ನು ಕಾಯುತಾನೆ. ತನ್ನದು ಅಂದಿರೋ ನಿಮ್ಮನ್ನ ಬಿಡುತಾನೆಯೇ (ಎಂದು ಹೊರಡುತ್ತಾನೆ)

## ಸ್ಥಾನ : ೫

ಮಾರನೆಯ ದಿನ. ಅದೇ ಸ್ಥಾನ.

(ಪುರಂದರದಾಸ, ಕನಕಣ್ಣ, ಅವನ ರಾಣಿ, ಮಗ ಬರುತ್ತಾರೆ)

ಪುರಂದರದಾಸ : ಕುಳ್ಳಿರಿ ತಾಯಿ, ಕೂತುಕೋ ಅಪ್ಪಾಜಿ. ಇತ್ತ ಬನ್ನಿ ಕನಕಣ್ಣ. ನಿನ್ನೆ ರಾತ್ರಿ ನಿಮ್ಮ ಮಗ ಹೇಳಿದ ಆ ಪದ್ಯದಲ್ಲಿ ಕೆಲವನ್ನ, ನಿಮ್ಮ ರಾಣಿಯವರು ಹಾಡಿದ ಆ ಸಾಂಗತ್ಯದ ಕೆಲವು ಚರಣಾನ, ಸ್ವಾಮಿಗಳಿಗೆ ಕೇಳಿಸೋಣ ಅಂತ ನನಗೆ ಆಸೆ. ಏನನ್ನತೀರಿ ?

ಕನಕಣ್ಣ : ಅಣ್ಣನವರು ಏನು ಮಾಡಿದರೂ ಸಮ.

ಪುರಂದದಾಸ : ನೀವು ಸಂಕೋಚಪಟ್ಕೊಂಡೀರೋ ಅಂತ ಕೇಳತಿದೇನೆ.

ಕನಕಣ್ಣ : ಅದು ಸರಿ ಅನ್ನಿರಿ. ಅಂದರೆ ನನಗೆ ಸಂಕೋಚ ಇಲ್ಲ. ಚೆನ್ನ ಇದ್ದರೆ ನನ್ನದಲ್ಲ; ಚೆನ್ನ ಇಲ್ಲ, ನನ್ನದಲ್ಲ. ಇಲ್ಲ ಇನ್ನೂ ಈ ಮಟ್ಟಕ್ಕೆ ಬಂದಿಲ್ಲ ಅಂದರೆ, ಬರೋಕೆ ಇದು ಒಂದು ಸಂದರ್ಭ.

ಪುರಂದರದಾಸ : ಸಂತೋಷ. ಸ್ವಾಮಿಗಳಿಗೆ ನಿಮ್ಮ ವಿಷಯ ಇಷ್ಟಷ್ಟು ವಿವರ ತಿಳಿದಹಾಗಾಗುತ್ತೆ. ನಾ ನಿಮ್ಮೊಂದಿಗೇ ನಡೆದಿದೇನೆ. ಆದರೂ ನನಗೆ ಇದರಿಂದ ಹೊಸ ಸಂಗತಿ ತಿಳೀತು. ಗುರುಗಳಿಗೆ ಇದು ಹೊಸತಾ ಗಿರೋದರಲ್ಲಿ ಏನು ಸಂದೇಹ? ಅವರು ಬಹಳ ಸಂತೋಷಪಡುತಾರೆ.

ಕನಕಣ್ಣ : ಆಗಲಿ, ಅಣ್ಣಾ ಅವರೆ.

(ವ್ಯಾಸರಾಯ ಬರುತ್ತಾನೆ. ಇವರೆಲ್ಲ ನಮಸ್ಕಾರ ಮಾಡುತ್ತಾರೆ)

ವ್ಯಾಸರಾಯ: ಕುಳ್ಳಿರಿ, ಕುಳ್ಳಿರಿ (ತಾನು ಪೀಠದಲ್ಲಿ ಕುಳಿತು ಇವರನ್ನೆಲ್ಲ ಕುಳ್ಳಿರ ಹೇಳಿ) ಈ ತಾಯಿ, ಈ ಮಗ ರಾತ್ರಿ ನಿಮ್ಮಲ್ಲಿ ಉಳಿದಿದ್ದರೋ ರಾಯರೇ ?

ಪುರಂದರದಾಸ: ಹೌದು ಮಹಾಸ್ವಾಮಿ. ನಾವು ಬರೋದು ಸ್ವಲ್ಪ ತಡ ವಾಯಿತು. ಇವರು ಮನೇ ಬಳಿ ಬಂದಿದ್ದರು. ಕನಕಣ್ಣ ಅಲ್ಲೇ ಇರೋದು ಅಂತ ಮಾಡಿಕೊಂಡಿದ್ದೆವು. ಇವರನ್ನೂ ಅಲ್ಲೇ ಇರಿ ಅಂದೆವು.

ವ್ಯಾಸರಾಯ: ಎಲ್ಲ ಅನುಕೂಲವಾಗಿತ್ತಲ್ಲ, ಕನಕಣ್ಣ ?

ಕನಕಣ್ಣ: ಹೆತ್ತವ್ವನ ಮಡಿಲು. ಇದರದೆ ಹೊರಸಾಲೆ. ನಮಗಿದು ವೈಕುಂಠ.

ವ್ಯಾಸರಾಯ: ಕೃಷ್ಣ! ಕೃಷ್ಣ! ಇದೆಂಥ ಮಾತು ಕನಕಣ್ಣ! ಏನು ಪಾವನ ಜನ್ಮ ನಿಮ್ಮದು! ಇದು ನಿಮಗೆ ವೈಕುಂಠ ದಿಟ. ಏಕೆ ಅಂದರೆ ನೀವು ನೀವು ಆದದ್ದರಿಂದ. ಇವರಿಗೆ ಧೈರ್ಯ ಹೇಳಿದಿರೋ ಇಲ್ಲವೋ ?

ಪುರಂದರದಾಸ: ಹೇಳಿ ಆಯಿತು, ಮಹಾಸ್ವಾಮಿ. ಕನಕಣ್ಣ ಇಲ್ಲಿಗೆ ಬಂದದ್ದು ಬೈರಾಗಿ ಆಗಬೇಕು ಅಂತ ಅಲ್ಲ. ಗುರುಗಳ ಸಾನ್ನಿಧ್ಯ ಬೇಕು ಅಂತ.

ಕನಕಣ್ಣ: ಅಪ್ಪಣೆ ಆದರೆ ನಾನೇ ಅರಿಕೆ ಮಾಡತೇನೆ.

ಪುರಂದರದಾಸ: ಮಾಡಿ.

ಕನಕಣ್ಣ: ನಾನು ಇಲ್ಲಿಗೆ ಬಂದದ್ದಕ್ಕೆ ಕಾರಣ ನಮ್ಮ ಮನೆ ಗುರುಗಳ ಅಪ್ಪಣೆ. ಅವರು ದೇಹ ಬಿಡುತಾ ಅಂದರು. ಅಪ್ಪಾ ನಾನು ಹೊರಡು ತೇನೆ. ಇದುವರೆಗೆ ನನಗೆ ತಿಳಿದಮಟ್ಟಿಗೆ ನಿನಗೆ ಒಂದು ಜೊತೆಯಾಗಿ ಇದ್ದೆ. ನಾ ಇಲ್ಲ ಅಂದಮೇಲೆ ನೀನು ದೇವರ ಸನ್ನಿಧೀಲಿ ಒಬ್ಬನಾಗುತೀ. ನೋಡು ಮನುಷ್ಯ ಆಗಿರೋ ರೀತೀಲಿ ಎಂಥಾ ಮನಸ್ಸೂ ಎಲ್ಲಾ ಹೊತ್ತೂ ದೇವರ ಸಾನ್ನಿಧ್ಯಾನ ಒಂದೇ ಸಮ ಅನುಭವಿಸೋದಿಲ್ಲ. ಹಾಗೆ ಅನುಭವಿಸಬೇಕು ಅಂದರೆ ಭಕ್ತರ ಸಹವಾಸ ಇರಬೇಕು. ನೀನು

ಇರೋದು ಇಲ್ಲಿ. ತೆಂಕ ಸೀಮೇಲಿ ಇದ್ದಿದ್ದರೆ ಶ್ರೀರಂಗಕ್ಕೆ ಹೋಗಿ ಬರುತಾ ಇರು ಅನ್ನತಾ ಇದ್ದೆ. ಬೇಲೂರು ಹಿಂದಿನ ವೈಭವ ದಲ್ಲಿದ್ದಿದ್ದರೆ ಅಲ್ಲಿಗೆ ಹೋಗಿಬರುತಾ ಇರು ಅನ್ನುತಿದ್ದೆ. ಭಾಗವತರ ಸಹವಾಸ ಸಿಕ್ಕುತಾ ಇತ್ತು. ಈ ಮಾತು ಈಗ ಹೊಂದೋದಿಲ್ಲ. ನಾನು ಬಲ್ಲಮಟ್ಟಿಗೆ ಈಗ ನಿನಗೆ ಒಂದೇ ಸರಿಯಾದ ಆಶ್ರಯ. ವಿಜಯನಗರ. ಅಲ್ಲಿ ಈಗ ವ್ಯಾಸರಾಯಸ್ವಾಮಿಗಳು ವಿರಾಜಮಾನ ರಾಗಿದ್ದಾರೆ. ವಿರಾಜಮಾನ ಅಂದರೆ ವಿರಾಜಮಾನ. ಅವರ ಹತ್ತಿರ ಪುರಂದರದಾಸರು ವಿಜಯವಾಗಿದ್ದಾರೆ. ವಿಜಯ ಅಂದರೆ ವಿಜಯ. ಅಲ್ಲಿಗೆ ಹೋಗು. ಅವರ ನೆರಳಲ್ಲಿ ನಿಲ್ಲು. ದೇವರನ್ನು ಧರಿಸಿದ ಗರುಡನ ರೆಕ್ಕೆ ಎರಡಾಗಿ ಅವರು ನಿನ್ನನ್ನು ನೋಡಿಕೊಳ್ಳುತಾರೆ. ನಿನ್ನ ಮನಸ್ಸು ನಿನ್ನ ಕೈಯಲ್ಲಿರುತ್ತೆ. ನಿನ್ನ ತಿಮ್ಮಪ್ಪನ ಸನ್ನಿಧಾನ ತಪ್ಪದೆ ಸಿದ್ಧಿಸುತ್ತೆ. ಗುರು ಹೀಗಂದರು. ಆಗಲಿ ಅಂದೆ. ನೋಡೋಣ ಅಂತ ಕೆಲವು ದಿನ ಕಳೆದೆ. ಒಂದು ದಿನ ಗುರುಗಳು ಹೇಳಿದ್ದ ಮಾತನ್ನು ದೇವರೇ ಅಪ್ಪಣೆ ಕೊಡಿಸಿದರು. ಇನ್ನು ತಳುವಬಾರದು ಅಂತ ಇತ್ತ ಹೊರಟುಬಂದೆ.

ವ್ಯಾಸರಾಯ: ನೀವು ಬರುವುದಕ್ಕೆ ಕಾರಣ ಏನು ಎನ್ನುವುದು ಕಾಣತಾ ಇದೆ. ನಾವೂ ದಾಸರಾಯರೂ ನಿಮಗೆ ಸರಿಯಾದ ಸಹವಾಸ ಎಂತ ದೇವರು ಅಪ್ಪಣೆಕೊಡಿಸಿದರು ಎಂದರೆ ನಮ್ಮ ಸ್ಥಿತಿ ತಕ್ಕಷ್ಟು ಒಳ್ಳೇದು ಎಂದಂತಾಯ್ತು. ಏನು ದಾಸರಾಯರೆ?

ಪುರಂದರದಾಸ: ಸನ್ನಿಧಾನದ ಮಾತು ನನ್ನ ಶಕ್ತಿಗೆ ಮೀರಿದ್ದು. ನನ್ನ ಮಾತು ಹೇಳಬಲ್ಲೆ. ನಾನು ಇವರಿಗೆ ಜೊತೆ ಆಗಬಹುದು ಅಂತ ದೇವರು ಅಪ್ಪಣೆಕೊಡಿಸಿದರು ಎಂದರೆ ನನ್ನ ಜನ್ಮ ಸಾರ್ಥಕ ಆಯಿತು ತಾನೆ.

ವ್ಯಾಸರಾಯ: ಮತ್ತೇನು ಕನಕಣ್ಣ? ಈ ತಾಯಿ ಈ ಮಗ ಇವರೊಂದಿಗೆ ಊರಿಗೆ ಹೊರಡುತೀರಲ್ಲ?

ಕನಕಣ್ಣ : ಅಪ್ಪಣೆ ಆದಂತೆ ಮಾಡುತೇನೆ.

ಪುರಂದರದಾಸ : ಹೊರಡುತಾರೆ, ಮಹಾಸ್ವಾಮಿ. ಅನುಜ್ಞೆ ಕೇಳಬೇಕೆಂತಲೇ ರಾಣಿ ಮಗ ಬಂದರು. ನಾನು ಕನಕಣ್ಣನ್ನ ಒಪ್ಪಿಸಿದ್ದೆ.

ಕನಕದಾಸ : ಈ ರಾಣಿಯರಾಣಿ, ದಾಸರಾಯರ ರಾಣಿ, ನಮಗೆಲ್ಲ ಬುದ್ಧಿ ಹೇಳಿದರು.

ವ್ಯಾಸರಾಯ : ಅಲ್ಲ? ಒಳ್ಳೆತು ಮಾಡಿದರು.

ಪುರಂದರದಾಸ : ಹೊರಡುವ ಮುನ್ನ ನಮ್ಮ ಅಪ್ಪಾಜಿ ಇವನು, ಇವರ ತಾಯಿ, ಕನಕಣ್ಣ ಮಾಡಿದ ಪದ್ಯ ಸಾಂಗತ್ಯ ಒಂದಿಷ್ಟು ಸನ್ನಿಧಾನಕ್ಕೆ ಕೇಳಿಸಲಿ ಅಂತ ನಾ ಕೇಳಿದೆ. ಆಗಲಿ ಅಂದಿದಾರೆ. ಅಪ್ಪಣೆ ಆದರೆ ಹೇಳತಾರೆ.

ವ್ಯಾಸರಾಯ : ಅವರು ಹೇಳೋದು ಹೇಳತಾ ನಾವು ಇಬ್ಬರೇ ಕೇಳೋಣ ಏಕೆ? ಏಕಃ ಸ್ವಾದು ನ ಭುಂಜೀತ. ಇದನ್ನ ನಾಳೆ ಮಾಡಿಸಿ. ಹತ್ತು ಜನ ಕೇಳಲಿ. ಕನಕಣ್ಣ ರಾಣಿ ಮಗ ನಾಳಿದ್ದು ಪ್ರಯಾಣ ಬೆಳಸಲಿ. (ಮಗ ಪುರಂದರದಾಸರ ಕಿವಿಯಲ್ಲಿ ಏನೋ ಹೇಳುತ್ತಾನೆ).

ಪುರಂದರದಾಸ: ಅಪ್ಪಣೆ ಮಹಾಸ್ವಾಮಿ. ರಾಣಿಯವರು ಸಭೆಯ ಮುಂದೆ ಹಾಡಲಾರರು ಅಂತ ಕಾಣುತ್ತೆ. ಕುಮಾರ ಪದ್ಯ ಓದುತಾನೆ.

## ಸ್ಥಾನ : ೬

(ಅದೇ ಸ್ಥಳ. ಪಂಡಿತ ಮಂಡಲಿ, ಶಿಷ್ಯಮಂಡಲಿ, ಸೇರಿವೆ. ವ್ಯಾಸರಾಯ, ಪುರಂದರದಾಸ, ಕನಕದಾಸ ಇದಾರೆ.ಸ್ವಾಮಿಯ ಸಮ್ಮುಖದಲ್ಲಿ ಕನಕದಾಸನ ಮಗ ಅವನ ಹಿಂದೆ ಅವನ ತಾಯಿ ಕುಳಿತಿದಾರೆ)

ವ್ಯಾಸರಾಯ : ನಮ್ಮ ಸಂಸ್ಥಾನದ ಅಭಿಮಾನಿಗಳಾದ ಕನಕಣ್ಣನವರು ಕೆಲವು ವರ್ಷಗಳ ಹಿಂದೆ ರಚಿಸಿದ ಎರಡು ಗ್ರಂಥಗಳ ಕೆಲವು ಭಾಗವನ್ನು ಓದುವಂತೆ ಏರ್ಪಾಡುಮಾಡಿ ಓದುವುದನ್ನು ಕೇಳಿ ಸಂತೋಷಪಡಲು ಈ ವಿದ್ವದ್ಗೋಷ್ಠಿಯನ್ನು ಬರಮಾಡಿಕೊಂಡಿದ್ದೇವೆ. ತಾವೆಲ್ಲ ದಯ

ಮಾಡಿರುವುದು ನಮಗೆ ತುಂಬ ಸಂತೋಷ. ಉಳಿದ ಮಾತನ್ನು ನಮ್ಮ ದಾಸರಾಯರು ಅರಿಕೆ ಮಾಡುತ್ತಾರೆ.

ಪುರಂದರದಾಸ : ಸ್ವಾಮಿ ಸನ್ನಿಧಿಯಲ್ಲಿ, ಗೋಷ್ಠಿಯ ಸಮ್ಮುಖದಲ್ಲಿ, ಸವಿನಯ ವಿಜ್ಞಾಪನೆ. ಕನಕಣ್ಣನವರು ಬಾಡದನಾಡ ಪ್ರಭುಗಳು. ಚಿಕ್ಕಂದು ರಾಜಯೋಗ್ಯವಾದ ವಿದ್ಯೆ ಕಲಿತರು. ಭಕ್ತರಾದ ತಂದೆ ತಾಯಿ ಮಗನನ್ನು ಭಕ್ತನಾಗಿ ಬೆಳಸಿದರು. ಹೀಗಾಗಿ ಕನಕಣ್ಣ ಚಿಕ್ಕಂದೇ ಪದ್ಯ ರಚಿಸಲು ತೊಡಗುವುದಾಯಿತು. ಚಿಕ್ಕ ವಯಸ್ಸಾದರೂ ಭಾವವೆಲ್ಲ ಪರಿಪಕ್ವದ ಭಾವವೇ. ಅವರು ಮುಖ್ಯವಾಗಿ ಬರೆದಿರುವುದು ಮೂರು ಗ್ರಂಥಗಳು. ನಳಚರಿತ್ರೆ, ಮೋಹನತರಂಗಿಣಿ, ಹರಿಭಕ್ತಿಸಾರ. ಮೂರು ದಿನದ ಹಿಂದೆ ಇಲ್ಲಿಗೆ ಅವರ ರಾಣಿಯವರೂ ಕುಮಾರರೂ ದಯಮಾಡಿಸಿದರು. ಅವರು ಈ ಗ್ರಂಥಗಳನ್ನು ಪಾಠ ಮಾಡಿದಾರೆನ್ನುವುದು ತಿಳಿದು ಸನ್ನಿಧಿಯಲ್ಲಿ ಹರಿಭಕ್ತಿ ಸಾರದ ಕೆಲವು ಪದ್ಯ ಹಾಡಿಸೋಣ ಎಂದು ಗುರುಸನ್ನಿಧಾನ ನಿಶ್ಚಯಿಸೋಣಾಯಿತು. ಅಪ್ಪಾಜಿ ಪದ್ಯ ಓದುತ್ತಾರೆ.

ವ್ಯಾಸರಾಯ : (ಬೇರೆಯಾಗಿ ಪುರಂದರದಾಸನಿಗೆ) ಯಾವ ಪದ್ಯ ಎಂತ ತಿಳಿಸಿದೀರಲ್ಲ ?

ಪುರಂದರದಾಸ : ತಿಳಿಸಿದೆ ಮಹಾಸ್ವಾಮಿ.

ವ್ಯಾಸರಾಯ : ಓದು, ಅಪ್ಪಾಜಿ.

ಮಗ : (ಗುರುಗಳಿಗೆ ಕೈಮುಗಿದು ಪದ್ಯಗಳನ್ನು ಹೇಳುತ್ತಾನೆ.)

ಶ್ರೀಯರಸ ಗಾಂಗೇಯನುತ, ಕೌಂ
ತೇಯ ವಂದಿತ ಚರಣ, ಕಮಲದ
ಳಾಯತಾಂಬಕ ರೂಪ, ಚಿನ್ಮಯ ದೇವಕೀತನಯ
ರಾಯ ರಘುಕುಲವರ್ಯ ಭೂಸುರ
ಪ್ರಿಯ, ಸುರಪುರನಿಲಯ, ಚೆನ್ನಿಗ
ರಾಯ, ಚತುರೋಪಾಯ, ರಕ್ಷಿಸು ನಮ್ಮನನವರತ.

ಗಿಳಿಯುಮರಿಯನು ತಂದು, ಪಂಜರ
ದೊಳಗೆ ಪೋಷಿಸಿ, ಕಲಿಸಿ ಮೃದುನುಡಿ
ಗಳನು, ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ
ತಿಳುಹಿ ಮತಿಯನು, ನನ್ನ ಜಿಹ್ವೆಗೆ
ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ.

ಹಸಿವರಿತು ತಾಯ್ತನ್ನ ಶಿಶುವಿಗೆ
ಒಸೆದು ಮೊಲೆಕೊಡುವಂತೆ ನೀಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು
ಬಸುರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ.

ಶಿವ ಶಿವಾ ನೀಮಾಡಿದುಪಕಾ
ರವನು ಮರೆವವರುಂಟೆ ಪಾಪದಿ
ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ
ಜವನವರ ಕೈಗೊಪ್ಪಿಸದೆ ಕಾ
ಯ್ದವನು ನೀ ಮಾಧವನು ಮಿಕ್ಕಾ
ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ.

ಇಲ್ಲಿಹನು ಇಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ
ನಿಲ್ಲದಿಲ್ಲನ್ಯತ್ರವೆಂಬುದನೆಲ್ಲೊ ಕೆಲಕೆಲರು
ಬಲ್ಲರಿಳೆಯೊಳು ಭಾಗವತರಾ
ಎಲ್ಲರಿಗೆ ವಂದಿಸುವೆ ಕುಜನರಿ
ಗಿಲ್ಲ ಸದ್ಗತಿ ನೋಡಿ ರಕ್ಷಿಸು ನಮ್ಮನನವರತ.

ದೀನ ನಾನು ಸಮಸ್ತಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು, ಮಹಾಮಹಿಮ ಕೈವಲ್ಯಪತಿ ನೀನು.
ಏನಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ.

ಮರೆದೆನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಪೊರೆಯೆಂ
ದೊರಲುವೆನು ಮನ ಏಕಭಾವದೊಳಿಲ್ಲ ನಿಮ್ಮಡಿಯ
ಮರೆದು ಬಾಹಿರನಾದೊಡೆಯು ನೀ
ಮರೆವರೇ ಹಸುತನ್ನ ಕರುವನು
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ.

ಗತಿವಿಹೀನರಿಗಾರು ನೀನೇ
ಗತಿಕಣಾ ಪತಿಕರಿಸಿಕೊಡು ಸ
ದ್ಗತಿಯನೀ ಎಲೆ ದೇವ ನಿನಗಪರಾಧಿ ನಾನಲ್ಲ.
ಶ್ರುತಿವಚನ ಆಡುವುದು ಶರಣಾ
ಗತರ ರಕ್ಷಕನೆಂದು ನಿನ್ನನು
ಮತವಿಡಿದುನಂಬಿದೆನು ರಕ್ಷಿಸು ನಮ್ಮನನವರತ.

ಈಗಳೋ ಈ ದೇಹವಿನ್ನಾ
ವಾಗಳೋ ನಿಜವಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆನುತ
ರಾಗಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ.

ಗೋಪುರದ ಭಾರವನು ಗಾರೆಯ
ರೂಪುತೋರಿದ ಪ್ರತಿಮೆಯಂದದಿ
ಈಪರಿಯ ಸಂಸಾರಭಾರವನಾರು ತಾಳುವರು
ತಾ ಪರಾಕ್ರಮಿಯೆಂದು ಮನುಜನು
ಕಾಪಥವನೈದುವನು ವಿಶ್ವ
ವ್ಯಾಪಕನು ನೀನಹುದು ರಕ್ಷಿಸು ನಮ್ಮನನವರತ.

ಲೋಕದೊಳಗತ್ಯಧಿಕವೆನಿಸುವ
ಕಾಗಿನೆಲೆ ಸಿರಿಯಾದಿಕೇಶವ
ತಾ ಕೃಪಾನಿಧಿ ನುಡಿಸಿದನು ಈ ಭಕ್ತಿಸಾರವನು
ಜೋಕೆಯಲಿ ಬರೆದೋದಿಕೇಳ್ವರ
ನಾಕುಲದಿ ಮಾಧವನು ಕರುಣಿಪ
ಶ್ರೀಕಮಲವಲ್ಲಭನು ಬಾಡದ ಆದಿಕೇಶವನು.



ಮಂಗಳಂ ಸರ್ವಾಧಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿ ಕೊಂಬವಗೆ.
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂಸಿರಿಯೊಡೆಯ ಚೆನ್ನಿಗರಾಯ ಕೇಶವಗೆ.

ವ್ಯಾಸರಾಯ: ತುಂಬ ಚೆನ್ನಾಗಿದೆ. ಕನಕಣ್ಣ ವರಕವಿ. ಕವಿತೆಗಿಂತ ಹೆಚ್ಚಾಗಿ ಇದರ ಭಾವ ಬಹು ದೊಡ್ಡದು. ಕಾವ್ಯ ಭಕ್ತಿಸಾರವೇ ಹೌದು.

ಸಭೆ: ಹೌದು, ಹೌದು.

ವ್ಯಾಸರಾಯ: ಈಗ ಕನಕಣ್ಣನವರವು ಕೀರ್ತನೆ ಎರಡನ್ನ ಹಾಡಿಸಿ

ಪುರಂದರದಾಸ: ಅಪ್ಪಣೆ ಆದರೆ ನಾನು ಹಾಡುತೇನೆ.

ವ್ಯಾಸರಾಯ : ಅವಶ್ಯವಾಗಿ ಆಗಲಿ. ಕೀರ್ತನೆ ಹೇಳಬೇಕೆಂದರೆ ತಮಗಿಂತ ಅರ್ಹರು ಯಾರು? ಅಲ್ಲದೆ ತಾವು ಹಾಡುವುದು ಅಂದರೆ ಕೀರ್ತನೆ ಮಾಡಿದವರಿಗೆ ಒಂದು ಗೌರವ ಮಾಡಿದಂತೆ.

ಕನಕಣ್ಣ : ಸತ್ಯ ಮಹಾಸ್ವಾಮಿ.

ಪುರಂದರದಾಸ : ಸ್ವಾಮಿಗಳ ಅನುಗ್ರಹ. ನಿಮ್ಮ ಅಕ್ಕರೆ.

(ಎಂದು ಎರಡು ಕೀರ್ತನೆಗಳನ್ನು ಹಾಡುತ್ತಾನೆ.)

ತನು ನಿನ್ನದು ಜೀವನ ನಿನ್ನದೋ
ಅನುದಿನದಲಿ ಬಹ್ರುಸುಖದುಃಖ ನಿನ್ನದಯ್ಯ.

ಸವಿನುಡಿ ವೇದಪುರಾಣಶಾಸ್ತ್ರಂಗಳ
ಕಿವಿಯಲ್ಲಿ ಕೇಳುವ ಕಥೆ, ನಿನ್ನದೋ
ನವಮೋಹನಾಂಗೀರ ರೂಪವ ಕಣ್ಣಲಿ
ಎವೆ ಇಕ್ಕದೆ ನೋಡುವ ನೋಟ ನಿನ್ನದಯ್ಯ.

ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ
ಬಿಡದೆ ಲೇಪಿಸಿಕೊಂಬುದು ನಿನ್ನದೋ
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡು ರುಚಿಗೊಂಬರೆ ಆ ರುಚಿ ನಿನ್ನದಯ್ಯ.

ಮಾಯಾಪಾಶದ ಬಲೆಯೊಳಗೆ ಸಿಲುಕಿರುವಂಥ
ಕಾಯಪಂಚೇಂದ್ರಿಯಗಳು ನಿನ್ನವೋ
ನ್ಯಾಯದಿ ಕನಕನ ಪೊರೆವಾದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೇ

ವ್ಯಾಸರಾಯ : ಚೆನ್ನಾಗಿದೆ. ಚೆನ್ನಾಗಿದೆ.

ಸಭೆ : ಹೌದು ಮಹಾಸ್ವಾಮಿ.

ಪುರಂದರದಾಸ : (ಮತ್ತೆ ಹಾಡುತ್ತಾನೆ)

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ.
ನೀ ದೇಹದೊಳಗೊ ನಿನ್ನೊಳು ದೇಹವೋ.

ಬಯಲು ಆಲಯದೊಳಗೊ ಆಲಯ ಬಯಲಿನೊಳಗೋ
ಬಯಲು ಆಲಯ ಎರಡೂ ನಯನದೊಳಗೋ
ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ
ನಯನಬುದ್ಧಿ ಇವೆರಡೂ ನಿನ್ನೊಳಗೋ ಕೃಷ್ಣಾ.

ಸವಿಯೊಳಗೆ ಸಕ್ಕರೆಯೊ ಸಕ್ಕರೆಯೊಳಗೆ ಸವಿಯೋ
ಸವಿಯು ಸಕ್ಕರೆ ಎರಡೂ ಜಿಹ್ವೆಯೊಳಗೋ
ಜಿಹ್ವೆಬುದ್ಧಿಯೊಳಗೊ ಬುದ್ಧಿಜಿಹ್ವೆಯೊಳಗೊ
ಜಿಹ್ವೆಬುದ್ಧಿ ಎರಡೂ ನಿನ್ನೊಳಗೊ ಕೃಷ್ಣಾ.

ಕುಸುಮದಲಿ ಗಂಧವೋ ಗಂಧದಲಿ ಕುಸುಮವೋ
ಕುಸುಮಗಂಧ ಇವೆರಡು ಘ್ರಾಣದೊಳಗೋ
ಅಸಮಭವ ಕಾಗಿನೆಲೆಯಾದಿಕೇಶವ ನಿನ್ನ
ಉಸುರಲೆನ್ನಳಲ್ಲ ಎಲ್ಲ ನಿನ್ನೊಳಗೇ.

ವ್ಯಾಸರಾಯ : ಪಂಡಿತರು ಏನು ಅಪ್ಪಣೆಕೊಡಿಸುತೀರಿ.

ಸಭೆಯ ಒಬ್ಬ ಹಿರಿಯ : ಶ್ರೇಷ್ಠವಾದ ರಚನೆ. ಜ್ಞಾನ ಇದೆ. ಭಾವ ಇದೆ. ಮಾತು ಚೆನ್ನ. ರಚನೆ ಲಲಿತವಾಗಿದೆ. ಮಕ್ಕಳಿಗೆ ಕೂಡ ತಿಳಿಯು ವಂತಿದೆ.

ವ್ಯಾಸರಾಯ : ಸರಿಯಾಗಿ ಅಪ್ಪಣೆಕೊಡಿಸೋಣವಾಯಿತು. ಸಂಗತಿ ವಿಷಯ ನಾವೂ ಹೇಳಬಹುದು. ಭಾಷೆಯ ವಿಷಯ ತಮ್ಮಂಥವರನ್ನ ಸೇರಿದ್ದು.

ಹಿರಿಯ : ಇಂಥ ಕೀರ್ತನ ನೂರನ್ನ ಕೇಳಿದ ಜನ ಓದುವ ಕಷ್ಟ ಇಲ್ಲದೆ ವೇದಾಂತದ ಸಾರವನ್ನು ಹೀರಿರುತಾರೆ.

ವ್ಯಾಸರಾಯ : ಕನಕಣ್ಣ ನೀವೇ ಒಂದು ಕೀರ್ತನೆ ಹಾಡುತೀರೋ?

ಕನಕಣ್ಣ : ಅಪ್ಪಣೆ. (ಹಾಡುತ್ತಾನೆ)

ತಲ್ಲಣಿಸದಿರು ಕಂಡ ತಾಳುಮನವೇ
ಎಲ್ಲರನು ಪೊರೆಯುವನು ಇದಕೆ ಸಂಶಯವೇ.

ಬೆಟ್ಟದಾತುದಿಯಲ್ಲಿ ಪುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ, ನೀರೆರೆದವರು ಯಾರು
ಹುಟ್ಟಿಸಿದ ದೇವನೇ ಹೊಣೆಗಾರನಾಗಿಹನು
ಗಟ್ಯಾಗಿ ತಿಳಿಕಂಡ ಇದಕೆ ಸಂಶಯ ಬೇಡ.

ನವಿಲಿಗೆ ಚಿತ್ರಪತ್ರವನು ಬರೆದವರು ಯಾರು
ಪವಳಲತೆಗೆ ಕೆಂಪಬಳಿದವರು ಯಾರು
ಸವಿಮಾತಿನರಗಿಳಿಗೆ ಸುಟಿಕಲಿಸಿದರು ಯಾರು
ಇವ ಮಾಡಿದವನು ನಿನ್ನನು ಪೊರೆಯದಿಹನೇ.

ಕಲ್ಲಿನೊಳಗಿರುವ ಕ್ರಿಮಿಕೀಟಗಳಿಗೆಲ್ಲಕೂ
ಅಲ್ಲೆ ಆಹಾರವನು ತಂದೀವನವನು
ಫುಲ್ಲಲೋಚನ ಕಾಗಿನೆಲೆಯಾದಿಕೇಶವನು
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ.

ವ್ಯಾಸರಾಯ : ಶ್ರೇಷ್ಠವಾದ ಉಪದೇಶ, ಶ್ರೇಷ್ಠವಾದ ರೀತಿಯಲ್ಲಿ ಹೇಳಿದೆ, ಕನಕಣ್ಣ. ಬಹಳ ಚೆನ್ನಾಗಿದೆ.

ಕನಕಣ್ಣ : ಗುರುಗಳ ಅನುಗ್ರಹ.

ವ್ಯಾಸರಾಯ : ಇಂಥ ಸಂಗತಿಯನ್ನು ಇಂಥ ಮಾತಿನಲ್ಲಿ ಹೇಳುವ ನಿಮ್ಮಂಥ ಜನ ಲೋಕದ ಗುರುಗಳು. ನಾವು ಕೆಲವರಿಗೆ ಹೇಳುವುದನ್ನು ನೀವು ಹಲವರಿಗೆ ತಿಳಿಸಿ ಉಪಕಾರ ಮಾಡುತೀರಿ. ಇದೇ ಕವಿಯ ಕೆಲಸ. ಇದನ್ನ ಮಾಡುವ ಮಾತೇ ಕವಿತೆ. ನಮ್ಮ ದಾಸರಾಯರು ನೀವು

ಅಣ್ಣತಮ್ಮನಾಗಿ ಈ ಕೆಲಸವನ್ನು ಚೆನ್ನಾಗಿ ನಡಸುತಿದೀರಿ. ಈ ದಿನ ನಿಮ್ಮ ಈ ಕೃತಿಗಳನ್ನು ಕೇಳಿ ನಮಗೆ ತುಂಬ ಸಂತೋಷ ಆಗಿದೆ. ಈ ಸಭೆ ನಿಮ್ಮನ್ನು ಮೆಚ್ಚಿಕೊಂಡಿದೆ. ನಮ್ಮ ಸಂಸ್ಥಾನದ ಪ್ರಿಯ ಶಿಷ್ಯ, ಅಭಿಮಾನಿ, ಕವಿ ಎಂತ ನೀವು ನಮ್ಮ ಈ ಉಚಿತವನ್ನು ಧರಿಸಬೇಕು.

(ಚಿನ್ನದ ತೋಡಾ ಒಂದನ್ನು ಕೊಡುತ್ತಾನೆ)

ಕನಕಣ್ಣ: (ಅದನ್ನು ತೆಗೆದುಕೊಂಡು) ಈ ಅನುಗ್ರಹ ನನ್ನನ್ನು ಕಾಪಾಡುತ್ತೆ. ಈ ಗೊಂಬೆಯಿಂದ ಇನ್ನಷ್ಟು ಸೇವೆಮಾಡಿಸುತ್ತೆ. (ಎಂದು ಕೈಮುಗಿಯುತ್ತಾನೆ)

ವ್ಯಾಸರಾಯ: ನೀವು ಹಾಗೆಯೇ ಹೇಳಿ. ಒಳಿತು. ನಿಮ್ಮ ರಾಣಿ, ಕುಮಾರರು, ನಾಳೆ ಊರಿಗೆ ಹೊರಡುವವರಾಗಿದಾರೆ. ನಿಮ್ಮನ್ನ ಕರೆದುಕೊಂಡು ಹೋಗಬೇಕೆನ್ನುತ್ತಾರೆ. ಅವರ ಇಷ್ಟವನ್ನು ನಡೆಸಿ, ಜೊತೆಗೆ ಹೋಗಿ ಬನ್ನಿ. ಬಾಡದ ಮನೆ ಕಾಗಿನೆಲೆ ಗುಡಿ ಹೇಗೆ ಹಾಗೆ ಈ ಮಠವೂ ನಿಮ್ಮ ನಿವಾಸ ಎನ್ನುವುದನ್ನ ನೆನಪಿನಲ್ಲಿಡಿ. ನೀವಿಲ್ಲ ಅಂತ ನಿಮ್ಮ ಮನೆಯ ಜನ ಆದಿಕೇಶವ ವಿರಹಪಡುವಂತೆ ಇಲ್ಲಿ ಒಬ್ಬ ಸಂನ್ಯಾಸಿ ವಿರಹದಲ್ಲಿರುತಾನೆ. ಇದನ್ನು ಮರೆಯಬೇಡಿ, ಹೋಗಿ ಬನ್ನಿ. (ಇವನ ರಾಣಿ ಕುಮಾರರು ನಮಸ್ಕಾರಮಾಡುತ್ತಾರೆ) ಶುಭಮಸ್ತು ಶುಭಮಸ್ತು.

## ಸ್ಥಾನ: ೭

ಹತ್ತು ವರುಷ ಕಳೆದಿದೆ. ವಿಜಯನಗರದ ಸಮೀಪ. ಕನಕದಾಸ ದಾರಿ ನಡೆಯುತ್ತಿದಾನೆ

ಕನಕಣ್ಣ:

ಶ್ರೀಯರಸ ಕಾಗಿನೆಲೆಯಾದಿಕೇಶವರಾಯ
ಮನೆಗುರುವ ಬೆಸನ ನಡೆಸೆಂದು ಅಂತರ್ಯಾಮಿ

ಹತ್ತು ವರುಷದ ಹಿಂದೆ ನೀನಿತ್ತ ಆಣತಿಯ
ಅನುಸರಿಸಿ ಗುರು ಇವರ ಪದವ ನಾ ಸಾರಿದೆನು.
ಹತ್ತು ವರುಷದ ದಿವಸ ಇವರ ನಡೆ ನುಡಿ ನನಗೆ
ಬಾಳ ಬಟ್ಟೆಯ ಹಾಕಿದವು. ಇವರ ತಿಳಿಗಣ್ಣ
ಬಲವ ಬೆಳಕಲಿ ನಾನು ಆ ಬಟ್ಟೆಯಲಿ ನಡೆದು
ಇರುವೆಡೆಯೆ ವೈಕುಂಠ ಎಂದ ಹಿರಿಯರ ನುಡಿಯ
ದಿಟವ ಚೇತನದೊಳನುಭವಿಸಿದೆನು. ಇನ್ನೆವರ
ಇಂತು ನನ್ನನು ಸಲಹಿತಂದ ಹಿರಿಯರು ಈಗ
ನಿನ್ನ ನಿತ್ಯವಿಭೂತಿಯೆಡೆ ಸಾರಲೆಂದು ಕರೆ
ಬಂದಿಹುದು ಎನುತಿಹರು. ದಾಸರಾಯರ ಮನೆಯ
ಮದುವೆ ಮಂಗಲ ನಡೆದು ಅವರು ಹಿಂದಿರುಗಿದುದೆ
ತಾವು ಹೊರಡುವರು ಎಂದರು. ಮದುವೆಗಳ ನಡಸಿ
ಅಣ್ಣನವರೀದಿನಕೆ ಹಿಂದಿರುಗಿ ಬಂದಿಹರು.
ಅವರು ಬಹದಿನಕೆ ನೀನೂ ಮರಳಿ ಬಾ, ಈಗ
ನಿನ್ನ ಊರಿಗೆ ಹೋಗಿ ನಾಲ್ಕು ದಿನ ಅಲ್ಲಿರು,
ಮನೆಯಜನ ಊರಜನ ನಾಡಜನ ಎಲ್ಲರನು
ಸಂತೋಷಪಡಿಸು, ಎಂದೆನ್ನನಟ್ಟಿದರು.
ಬೆಸನಂತೆ ಹೋದೆನು. ಬೆಸನಂತೆ ಬರುತಿಹೆನು.
ಹೋದವನು ಬರುತ ಇನ್ನಿವರ ಸಾನ್ನಿಧ್ಯಸುಖ
ಇಲ್ಲವಾಗುವುದೆ ಎನ್ನುವ ನೋವಿನಲಿ ಸಿಲುಕಿ,
ನೀರಿಂದ ಹೊರಗೆಸೆದ ಮೀನು ಒಂದೆಂಬಂದ,
ಉಸಿರು ಕಟ್ಟುವ ಘಟ್ಟವನು ಮುಟ್ಟಿ, ಮೂರ್ಛೆಯಲಿ
ಮೆಯ್ಯಮರೆವೆನೊ ಎಂದು ಅಂಜುತಿರುವೆನು. ತಂದೆ,
ಮನೆದೈವ ನರಸಿಂಹ, ಅಂದು ಒಳದನಿಯಿಂದ
ಇಂತು ನಡೆಯೆಂದ ಕೇಶವ, ವೇಂಗಡದ ಅಪ್ಪ,
ಕಾರುಣ್ಯಮೂರ್ತಿ, ಇಂದಂತೆ ಒಳದನಿಯಿಂದ
ಮುಂದೆ ನಾನೆಂತು ನಡೆವುದು ಎಂಬುದನು ಬೆಸಸು.

ಬೆಸಸು; ಇಲ್ಲವೆ ಕೈಯ ಹಿಡಿದು ನೀನೇ ನಡಸು.
ನುಡಿ ನೀನು. ಮೌನವೂ ನೀನು. ನನ್ನತು ಎಂಬ
ಈ ಬುದ್ಧಿ ಈ ಮನದ ಎಲ್ಲ ಎಣಿಕೆಯು ನೀನು.
ದಾರಿ ನೀಡೆಂದು ಪ್ರತ್ಯೇಕ ಬೇಡಲಿ ಏಕೆ?
"ನಾನೆ"ಂದು ನಡೆಯುತಿಹ ನಾವೆಲ್ಲ ಗೊಂಬೆಗಳು;
ಎಲ್ಲರನು ನೀ ಸೂತ್ರ ಹಿಡಿದು ನಡೆಸುತಲಿರುವೆ.
ನಿನ್ನಿಚ್ಛೆಯೆಂತಂತೆ ನಡಸು; ನಡೆಯುತಲಿಹುದು
ಎಲ್ಲ ನಿನ್ನಿಚ್ಛೆಯೆಂಬರಿವ ನಿಶ್ಚಯ ಮಾಡು.
ಇಲ್ಲಿ ನಿಲ್ಲಲಿಯಾರು, ನಿನ್ನ ಸಾರಲಿಯಾರು,
ನೀನು ನಿರ್ಣಯಿಸಿರುವೆ ಇದನು. ನಿರ್ಣಯ ನಿನತು
ಎಂದೆನೇ ಅದು ಕೃಪಾಪೂರ್ಣ. ಕಾರುಣ್ಯವೇ
ನೀನು, ನೀ ಕಾರುಣ್ಯ. ಶ್ರೀಯರಸ, ಕರುಣಾಳು,
ಸಲಹುವುದ ಬಲ್ಲ ನಿನ್ನಡಿಗಳಲಿ, ಇಕೊ, ಶರಣು.

## ಸ್ಥಾನ: ೮

ಅದೇ ಸ್ಥಳ. ಆ ಮಧ್ಯಾಹ್ನ ವ್ಯಾಸರಾಯರು ಪುರಂದರ
ದಾಸ ಕುಳಿತಿದಾರೆ.

ವ್ಯಾಸರಾಯ: ನೀವೆಲ್ಲ ಈ ಬೆಳಗ್ಗೆ ಬಂದಿರೋ?

ಪುರಂದರದಾಸ: ಹೌದು ಗುರುಗಳೆ.

ವ್ಯಾಸರಾಯ; ಶುಭವೆಲ್ಲ ಸಂಭ್ರಮದಿಂದ ನಡೆಯಿತಂತೆ.

ಪುರಂದರದಾಸ: ಎಲ್ಲ ತಮ್ಮ ಅನುಗ್ರಹ.

ವ್ಯಾಸರಾಯ: ನೀವು ಈ ಸುಮಾರಿಗೆ ಬಂದೀರಿ ಎಂತ ನಿರೀಕ್ಷಿಸಿ ನಾವು ಕನಕಣ್ಣನಿಗೂ ಹೇಳಿದ್ದೆವು. ನಾವು ಈ ದೇಹವನ್ನು ಬಿಡುವ ವೇಳೆಗೆ ನೀವೂ ಅವರೂ ನಮ್ಮ ಜೊತೆಗಿರಬೇಕು ಎಂತ ಅಪೇಕ್ಷೆ ಇದೆ.

ಪುರಂದರದಾಸ : ನಮ್ಮ ಪಾಡು ?

ವ್ಯಾಸರಾಯ : ವೃದ್ಧನಾದ ತಂದೆಯನ್ನು ವೈಕುಂಠಕ್ಕೆ ಕಳುಹಿಸುವ ಮಕ್ಕಳ ಪಾಡು.

ಪುರಂದರದಾಸ : ಅಪ್ಪಣೆ.

ವ್ಯಾಸರಾಯ : ಕನಕಣ್ಣ ಬಂದಮೇಲೆ ವಿವಿಕ್ತವಾಗಿ ಎರಡು ದಿನ ಒಂದೆಡೆ ಇರೋಣ. ಆ ಮುನ್ನ ನಮ್ಮ ಶ್ರೀನಿವಾಸತೀರ್ಥರಿಗೆ ಗೋವಿಂದ ಒಡೆಯರಿಗೆ ಅರಿಕೆಮಾಡಬೇಕಾದ ಸಂಗತಿ ಒಂದಿದೆ. ಅವರಿಗೆ ಹೇಳಿ ಕಳುಹಿಸಿದೇನೆ. ಈಗ ಬಂದಾರು.

ಪುರಂದರದಾಸ : ಹಾಗಾದರೆ ನಾ ಮರಳಿ ಬರಲೆ ?

ವ್ಯಾಸರಾಯ : ಅಂಥ ರಹಸ್ಯವೇನೂ ಅಲ್ಲ. ಎಂದರೂ ಮಾತು ಕಿಂಚಿತ್ ನಿಮ್ಮನ್ನ ಕುರಿತು ಇರುತ್ತೆ ಆದ್ದರಿಂದ ಬೇರೆ ನಿಂತರೆ ತಪ್ಪಲ್ಲ. ಒಳಗೆ ಇರಿ. ಇಲ್ಲಿ ಮಾತು ಮುಗಿಯುತಲೂ ಕರಸುತೇವೆ.

ಪುರಂದರದಾಸ : ಅಪ್ಪಣೆ. (ಏಳುತ್ತಾನೆ. ಶ್ರೀನಿವಾಸತೀರ್ಥ ಗೋವಿಂದ ಒಡೆಯರು ಬರುತ್ತಾರೆ. ಪುರಂದರದಾಸ ನಮಸ್ಕಾರಮಾಡಿ ಹೊರಡುತ್ತಾನೆ. ಬಂದವರು ಗುರುವಿಗೆ ನಮಸ್ಕಾರ ಮಾಡುತ್ತಾರೆ)

ವ್ಯಾಸರಾಯ : ಬನ್ನಿ ಒಡೆಯರೆ, ಬನ್ನಿ ತೀರ್ಥರೆ. ಕುಳ್ಳಿರಿ. (ಅವರು ಕುಳಿತಮೇಲೆ) ದಾಸರಾಯರು ಮಕ್ಕಳ ಮದುವೆ ನಡಸಿ ಬಂದೊಡನೆ ನಾವು ವಿವಿಕ್ತವಾಗಿ ನಾಲ್ಕು ದಿನ ನಿಂತು ದೈವ ಸನ್ನಿಧಿಗೆ ನಡೆಯುವುದೆಂದು ನಿಶ್ಚಯಿಸಿದ್ದೆವು. ದಾಸರಾಯರು ಇಂದು ಹಿಂದಿರುಗಿದ್ದಾರೆ. ಕನಕಣ್ಣನೂ ಇಂದೊ ನಾಳೆಯೊ ಬರಬಹುದು. ಅವರು ಬಂದೊಡನೆ ನಾವು ಬೃಂದಾವನಕ್ಕೆ ತೆರಳುವೆವು.

ಶ್ರೀನಿವಾಸತೀರ್ಥ : (ಕಣ್ಣೊರಸಿಕೊಳ್ಳುತ್ತ) ಓ ಅಪ್ಪಣೆ.

ಗೋವಿಂದ ಒಡೆಯ : ಶ್ರೀನಿವಾಸತೀರ್ಥರ ಶಂಕೆ ನಿಜವಾಯಿತು.

ವ್ಯಾಸರಾಯ : (ಶ್ರೀನಿವಾಸ ತೀರ್ಥನಿಗೆ) ಏನು ಅಪ್ಪಣೆ ಕೊಡಿಸಿದಿರಿ ?

ಶ್ರೀನಿವಾಸತೀರ್ಥ: ಏನು ಅದು ಒಡೆಯರೆ?

ವ್ಯಾಸರಾಯ: ಏನೇ ಇರಲಿ, ಅದು ಈ ದಿನದಿಂದ ಈ ಪೀಠದ ಅಧಿಕಾರಿಯಾಗುವ ಹಿರಿಯರಲ್ಲಿ ಯುಕ್ತವಾದ ಶಂಕೆ ಆಗಬೇಕು.

ಶ್ರೀನಿವಾಸತೀರ್ಥ: ನೀವು ಕುಳಿತ ಪೀಠದಲ್ಲಿ ಕುಳ್ಳಿರಲು ನನಗೆ ಯೋಗ್ಯತೆ ಇಲ್ಲ ಎಂತ ನಾನು ಕಾಲಮೇಲೆ ಬಿದ್ದು ಹೇಳಿಕೊಂಡೆನೇ. ತಮಗೆ ಕೃಪೆ ಬರಬೇಕು. ನಾನು ಈಗಲೂ ತಮ್ಮ ಪೂರ್ವಾಶ್ರಮದ ಸೋದರಳಿಯ. ನನ್ನ ಮನಸ್ಸಿಗೆ ಕಾವಿ ಹಾಕಿಲ್ಲ.

ಗೋವಿಂದ ಒಡೆಯ: ತೀರ್ಥರು ಅಪ್ಪಣೆ ಕೊಡಿಸಿದರು. ಕೃಷ್ಣದೇವರಾಯರು ಸ್ವರ್ಗಸ್ಥರಾದರು, ಪೀಠದ ವೈಭವ ಅರ್ಧ ಆಯಿತು, ಗುರುರಾಯರು ಹೊರಟರೆಂದರೆ ಇನ್ನರ್ಧ ಅಳಿಯುತ್ತೆ, ಅಂತ. ಎಲ್ಲ ಅಳಿಯದಿದ್ದರೂ ಬಹು ಭಾಗ ಕಡಮೆಯಾಗುತ್ತೆ.

ವ್ಯಾಸರಾಯ: ತೀರ್ಥರೂ ತಾವೂ ಒಂದು ಸಂಗತಿಯನ್ನು ಮನಸ್ಸಿಗೆ ತಂದುಕೊಳ್ಳಬೇಕು, ಒಡೆಯರೆ. ಪೀಠ ಸಾಮಾನ್ಯ ಒಂದು ಗದ್ದುಗೆ ಅಲ್ಲ. ಹಿರಿಯರನ್ನು ಮಡಿಲಲ್ಲಿರಿಸಿಕೊಂಡು ಮತ್ತಷ್ಟು ಹಿರಿಯರನ್ನಾಗಿ ಮಾಡಿದ ಸ್ಥಾನ ಇದು. ನೀವು ನಮ್ಮನ್ನು ಹಿರಿಯ ಎನ್ನುತ್ತಿದೀರಿ. ನಾವು ಹಿರಿಯರಾದದ್ದೂ ಪೀಠದಿಂದ. ಅದು ತೀರ್ಥರು ಕುಳಿತರೆ ತೀರ್ಥರನ್ನ, ನೀವು ಕುಳಿತರೆ ನಿಮ್ಮನ್ನ, ಹಿರಿಯರನ್ನು ಮಾಡುತ್ತದೆ. ತೀರ್ಥರು ಅಹಂಕಾರಿಯಾಗಿದ್ದರೆ ಈ ವಿಷಯದಲ್ಲಿ ನಾವು ಸಂದೇಹ ಪಡಬೇಕಾಗಿತ್ತು. ವಿನಯವಂತರಾಗಿದಾರೆ. ಹೀಗೆಯೇ ಇರಲಿ. ಅವರಿಗೇ ತಿಳಿಯದೆ ಅವರು ಹಿರಿಯರಾಗುತ್ತಾರೆ.

ಶ್ರೀನಿವಾಸತೀರ್ಥ: ಆದರೂ ನನಗೆ ಅಧೈರ್ಯ. ಈಗಲೂ ಗೋವಿಂದ ಒಡೆಯರು ಒಪ್ಪುವುದಾದರೆ. . .

ಗೋವಿಂದ ಒಡೆಯ: ನೀವು ಈ ಪೀಠವನ್ನು ನನಗೆ ಬಿಟ್ಟು ಕೊಡುವವರು.

ಶ್ರೀನಿವಾಸತೀರ್ಥ: ಹೌದು.

ಗೋವಿಂದ ಒಡೆಯ : ನೀವು ಸಜ್ಜನರು, ಒಪ್ಪಿದೆ. ಅಂದರೆ ಈ ಪೀಠವನ್ನು ಏರೋದಕ್ಕೆ ನಿಮಗೆ ಬರೀ ಅಧೈರ್ಯ, ನನಗೆ ಭಯ.

ವ್ಯಾಸರಾಯ : (ನಗುತ್ತ) ನೀವೂ ಸಜ್ಜನರೆ ಒಡೆಯರೆ. ಎಂದರೆ ಇಬ್ಬರು ಸಜ್ಜನರು ಸೇರಿ ಒಬ್ಬ ಮುದುಕನ ಬಾಳು ಮುಗಿಯುವ ದಿನ ಅವನಿಗೆ ಸಮಾಧಾನ ಇಲ್ಲದಂತೆ ಮಾಡಬೇಡಿ. ನಿಮ್ಮ ಅಧೈರ್ಯಕ್ಕೆ ಭಯಕ್ಕೆ ಕಾರಣ ನಾವು ಇನ್ನೂ ಇಲ್ಲಿದೇವೆ ಎನ್ನುವುದೇ. ನಾವು ಹೊರಟೆ ವೆಂದರೆ ನಿಮಗೆ ಧೈರ್ಯ ಬರುತ್ತೆ.

ಶ್ರೀನಿವಾಸತೀರ್ಥ : ಹಾಗೆ ಅಂತ ಅನುಗ್ರಹಿಸಿ.

ವ್ಯಾಸರಾಯ : ಅನುಗ್ರಹಿಸಿದೆ. ಎಲ್ಲ ಸರಿಹೋಗುತ್ತೆ. ಈ ಮಾತು ಆಗಿ ನಾವು ನಿಮಗೆ ಹೇಳಬೇಕಂತ ಯೋಚಿಸಿದ್ದು ಬೇರೆ ಸಂಗತಿ ಇತ್ತು. ಅದನ್ನು ನೀವು ಮನಸ್ಸಿಗೆ ತಂದು ಕೊಳ್ಳಬೇಕು.

ಗೋವಿಂದ ಒಡೆಯ : ಅಪ್ಪಣೆ ಆಗಬೇಕು.

ವ್ಯಾಸರಾಯ : ಪೀಠದ ಎಲ್ಲ ಕೆಲಸವೂ ಸರಿಯಾಗಿ ನಡೆಯುತ್ತದೆ. ಒಂದೇ ಒಂದು ವಿವರದಲ್ಲಿ ನಮಗೆ ಶಂಕೆ.

ಶ್ರೀನಿವಾಸತೀರ್ಥ : ಅಪ್ಪಣೆ ಆಗಬೇಕು.

ವ್ಯಾಸರಾಯ : ಈ ಪೀಠದ ವಿಶಿಷ್ಟ ಲಕ್ಷಣ, ಇದು ಜ್ಞಾನ ಭಕ್ತಿ ಎರಡಕ್ಕೂ ಆಕರವಾಗಿರತಕ್ಕದ್ದು. ನಮ್ಮ ಹಿರಿಯರು ಇದನ್ನು ಹೀಗೆ ನಡಸಿ ಕೊಂಡು ಬಂದರು. ನಾವೂ ನಮ್ಮಿಂದಾದಷ್ಟು ಹೀಗೆಯೇ ಮಾಡಿ ದೇವೆ. ಮುಂದೆ ನೀವಿಬ್ಬರೂ ಈ ವಿಷಯದಲ್ಲಿ ಎಚ್ಚರ ವಹಿಸಬೇಕು.

ಗೋವಿಂದ ಒಡೆಯ : ಅಪ್ಪಣೆ.

ವ್ಯಾಸರಾಯ : ತಾವೆಲ್ಲ ಭಕ್ತರೆ. ಯಾರೂ ಪಾಷಂಡಿಗಳಲ್ಲ. ಆದರೆ ಭಕ್ತಿ ಪ್ರಧಾನ ಎಂತ ನಿಮ್ಮ ಮನಸ್ಸಿಗೆ ತೋರುವುದಿಲ್ಲ. ಬಲ್ಲವರು ನೀವು ಹೀಗಿರಬೇಕಾದರೆ ಸಾಮಾನ್ಯರ ಮಾತೇನು? ಬರಿಯ ಭಕ್ತಿ ಅವರಿಗೆ ಹುಚ್ಚು ಎಂತಲೇ ಕಾಣುತ್ತೆ.

ಶ್ರೀನಿವಾಸತೀರ್ಥ : ಸತ್ಯ.

ವ್ಯಾಸರಾಯ : ಈ ನಮ್ಮ ದಿನದಲ್ಲಿ ನಮ್ಮ ಮಠದ ಹೆಸರು ಹೇಳುತಾ ಇಬ್ಬರು ಅಂಶಪುರುಷರು ಭಕ್ತಿ ಮಾರ್ಗದ ಪ್ರಚಾರಕರಾಗಿ ನಡೆದಿದಾರೆ. ಅವರನ್ನು ಮಠದಲ್ಲಿ ಮರ್ಯಾದೆಯಿಂದ ನಡಸಿಕೊಳ್ಳುವುದು ಧರ್ಮದ ಜೀವತಂತು ಎಂತ ತಾವಿಬ್ಬರೂ ತಿಳಿಯಬೇಕು.

ಗೋವಿಂದ ಒಡೆಯ : ಅಪ್ಪಣೆ.

ವ್ಯಾಸರಾಯ : ಭಕ್ತಿ ರಸ, ಜ್ಞಾನ ತಿರುಳು. ರಸ ತಿರುಳು ಸೇರಿರುವ ಫಲ ಕೆಲವು, ಬೇರೆಯಾಗಿರೋ ಫಲ ಕೆಲವು. ದಾಸರಾಯರು ಕನಕಣ್ಣ ಮಾವಿನ ಹಣ್ಣು ದ್ರಾಕ್ಷೆಹಣ್ಣಿನಂತೆ ಭಕ್ತಿ, ಜ್ಞಾನ, ರಸಾಯನವಾಗಿ ಸೇರಿರುವ ಜೀವಗಳು. ಜ್ಞಾನ ಹೆಚ್ಚಾಗಿ ಭಕ್ತಿ ಇಂಗುವುದುಂಟು. ಅದಕ್ಕೆ ತೆಂಗಿನಕಾಯಿ ನಿದರ್ಶನ. ರಸ ಇಂಗಿಯೇ ಹೋಯಿತು. ಅದು ಗಿಟಕಾಗುತ್ತೆ. ದೇವರಿಗೆ ಒಪ್ಪಿಸೋಕೆ ಬರೋಲ್ಲ.

ಗೋವಿಂದ ಒಡೆಯ : ಎಂಥ ಮಾತು !

ವ್ಯಾಸರಾಯ : ನಮ್ಮ ಮಠದ ಪಂಡಿತರು ಅದರ ಕೀರ್ತಿಯನ್ನು ಉಳಿಸು ವಂತೆ ವ್ಯಾಸಂಗ ಮಾಡುತಾ ಇರಬೇಕು. ಮತ್ತಷ್ಟು ಪಂಡಿತರಾಗ ಬೇಕು. ಆದ ಮಾತ್ರಕ್ಕೆ ಪಂಡಿತರಲ್ಲ ಎಂತ ಈ ಹಿರಿಯರನ್ನ ಕಡೆಗಣಿಸ ಬಾರದು. ಕಡೆಗಣಿಸಿದರು, ತಾವು ಅದಕ್ಕೆ ಸಮ್ಮತಿಸಬಾರದು.

ಶ್ರೀನಿವಾಸತೀರ್ಥ : ಅಪ್ಪಣೆ. ನನಗೆ ಅವರಿಬ್ಬರ ವಿಷಯದಲ್ಲೂ ಬಹಳ ಗೌರವ ಇದೆ.

ಗೋವಿಂದ ಒಡೆಯ : ನನಗಾದರೂ ಹಾಗೆಯೇ.

ವ್ಯಾಸರಾಯ : ಸಂತೋಷ. ದಾಸರಾಯರ ಮಾತಿಗೂ ನಮಗೆ ಅಷ್ಟು ಶಂಕೆ ಇಲ್ಲ. ಇವರು ಅವರನ್ನು ಜೊತೆಗೆ ನಡಸಿಕೊಳ್ಳುತಾರೆ. ಕನಕಣ್ಣನ ವಿಷಯದಲ್ಲಿ ಕುಲದ ದೃಷ್ಟಿಯಿಂದ ಅವಿವೇಕವಾಗಿ ನಡಕೊಳ್ಳುತಾರೆ.

ಶ್ರೀನಿವಾಸತೀರ್ಥ : ಹೌದು.

ವ್ಯಾಸರಾಯ : ಕನಕಣ್ಣ ಸಾಮಾನ್ಯ ಮನುಷ್ಯನಲ್ಲ. ಧರ್ಮದ ದೈವವೇ ಆ ರೂಪಿನಲ್ಲಿ ಬಂದಿದೆ. ಅಂಥಾ ನಿಷ್ಪಕ್ಷ ಪಾತಿಯ ಜೀತನ ಆತನದು. ನೀವೆಲ್ಲ ಬಲ್ಲಿರಿ. ನಾವು ನೂರು ಸಲ ಅವರನ್ನು ಸಲಿಗೆಯಿಂದ ನಡಸಿಕೊಳ್ಳೋಣ ಎಂತ ನೋಡಿದೇವೆ. ಆದರೆ ಆತ ದೂರ ನಿಂತಿದಾರೆ; ಇದು ತಮ್ಮೊಬ್ಬರ ಮಾತಲ್ಲ, ಹತ್ತು ಜನರ ಮಾತು, ಎಂತ ತನ್ನ ನಡತೆಯನ್ನು ಸಮರ್ಥಿಸಿಕೊಂಡಿದಾರೆ.

ಗೋವಿಂದ ಒಡೆಯ : ಅವರು ಒಮ್ಮೆ ಒಂದು ಮಾತು ಆಡಿದರು.

ವ್ಯಾಸರಾಯ : ಏನದು ?

ಗೋವಿಂದ ಒಡೆಯ : ನಾನು ದೊಡ್ಡವನು ಅನ್ನೋದು ಒಬ್ಬನ ತಪ್ಪಾದರೆ ನಾನೇನು ಕಡಮೆ ಅನ್ನೋದು ಇನ್ನೊಬ್ಬನ ತಪ್ಪು ಎಂದರು. ನಾವು ಬೇಕಾದರೆ ಆ ಮಾತನ್ನಾಡಬಹುದು, ತಾವು ಈ ಮಾತನಾಡುವವರಲ್ಲ ಅಂತ.

ಶ್ರೀನಿವಾಸತೀರ್ಥ : ಹೌದು.

ವ್ಯಾಸರಾಯ : ಜಾಣ ಮನುಷ್ಯ. ಆತನ ಮಾತೇ ಚಮತ್ಕಾರದ ಮಾತು. ಯಾರ್ಯಾರಿಗೆ ಎಷ್ಟೆಷ್ಟು ಜನ್ಮಕ್ಕೆ ಮುಕ್ತಿ ಎನ್ನುವುದಕ್ಕೆ ಹೇಳಿದ ಉತ್ತರ ನೆನಪಿದೆಯಲ್ಲ ? ಈ ಜನ್ಮ ಆದೊಡನೆ ಮುಕ್ತಿಗೆ ಸಲ್ಲುವುದು ನಾವೂ ಅಲ್ಲ. ನಮ್ಮ ಗುರುಗಳೂ ಅಲ್ಲ. ತಾನು ಹೋದರೆ ಹೋಗ ಬಹುದು. ಎಲಾ ಇದೇನು ಇವನ ಅಹಂಕಾರ ಎಂದರು ಕೇಳಿದವರು. ಕ್ಷಣ ಬಿಟ್ಟು ತಿಳಿದರು, ತಾನು ಎಂದರೆ ಕನಕಣ್ಣ ಅಲ್ಲ, ಅಹಂಕಾರ ಅಂತ.

ಶ್ರೀನಿವಾಸತೀರ್ಥ : ಜಾಣ. ಮತ್ತಃ ಪ್ರತ್ಯವರಃ ಕಶ್ಚಿತ್ ನಾಸ್ತಿ ಈ ವ್ಯಾಸ ಸನ್ನಿಧೌ, ಎಂತ ಶ್ಲೋಕಾನ ತಿರುಗಿಸಿ ಹೇಳಿ ನಗುತಾರೆ.

ಗೋವಿಂದ ಒಡೆಯ : ಜಾಣ. ದೊಡ್ಡ ಮನುಷ್ಯ.

ವ್ಯಾಸರಾಯ: ಅಲ್ಲ? ತುಂಬ ದೊಡ್ಡ ಮನುಷ್ಯ. ಆತನಿಗೆ ದೇವರು ಸದಾ ಪ್ರತ್ಯಕ್ಷ. ಆ ಬಾಳೇಹಣ್ಣಿನ ಸಂಗತಿ ನೆನಪು ಮಾಡಿಕೊಳ್ಳಿ. ದೇವರು ಎಲ್ಲಿಯೂ ಇದಾರೆ, ಎಲ್ಲವನ್ನೂ ನೋಡುತಿರುತ್ತಾರೆ, ಎಂತ ಆಚಾರ್ಯರು ಉಪನ್ಯಾಸ ಮಾಡಿದಮೇಲೆ ನಾವು ಕೊಂಡೆಯದ ಜನ ರನ್ನು ಆತನನ್ನ ಕರೆದು ಹತ್ತು ಜನಕ್ಕೆ ಹತ್ತು ಹಣ್ಣು ಕೊಟ್ಟು, ಯಾರೂ ನೋಡದಂತೆ ತಿಂದು ಬನ್ನಿ ಎಂದೆವು. ಒಂಬತ್ತು ಜನ ಅಲ್ಲಿ ಇಲ್ಲಿ ಮರೆಯಲ್ಲಿ ತಿಂದು ಬಂದರು, ಯಾರಿಗೂ ಕಾಣದಂತೆ ತಿಂದೆವು ಎಂದರು. ಕನಕಣ್ಣ ಹಣ್ಣನ್ನು ಹಾಗೆಯೇ ತಂದರು. ಯಾರೂ ಕಾಣದಂತೆ ತಿನ್ನಲಾಗಲಿಲ್ಲ ಎಂದರು. ಯಾಕೆ ಎಂದರೆ ಎಲ್ಲಿ ಹೋದರೂ ದೇವರು ನೋಡುತಾ ಇದಾರೆ, ಆಚಾರ್ಯರು ಅಪ್ಪಣೆ ಕೊಡಿಸಿದ ಮಾತು ಮನಸ್ಸಿಗೆ ಹೀಗೆ ಮುಟ್ಟಿತ್ತು, ಹೋದಲ್ಲೆಲ್ಲ ಶ್ರೀನಿವಾಸನ ಎರಡು ಕಣ್ಣು ಎದುರಿಗಿದ್ದು ಬಿಟ್ಟವು, ಎಂದರು.

ಶ್ರೀನಿವಾಸತೀರ್ಥ: ಬಹು ಭಾವುಕ ಜೀವ. ಸತ್ಯ ಎಂದ ಯಾವುದೂ ಮನಸ್ಸಿಗೆ ಅಷ್ಟು ಖಚಿತ, ಅಷ್ಟು ತಥ್ಯ. ಕನಕಣ್ಣ ಸದಾ ದೇವರ ಧ್ಯಾನದಲ್ಲಿರುತ್ತಾರೆ. ಹಾದೀಲಿ ನಡೆಯುತಾ ಒಳ್ಳೇ ಹೂವುಕಂಡರೆ ಅಪ್ಪಾ ಇದು ನಿನಗೆ ಅರ್ಪಿತ ಎನ್ನುತ್ತಾರೆ. ಒಮ್ಮೆ ನಮ್ಮ ಆಚಾರ್ಯರು ಅಷ್ಟು ಹೂ ತಂದರು. ಅದನ್ನು ನೋಡಿದರೆ ನಮಗೆ ನಿರ್ಮಾಲ್ಯ ಅನ್ನಿಸಿತು. ಏನಯ್ಯ ಅಂದರೆ ತೋಟದಿಂದ ನೇರ ತಂದೆ ಎಂದರು. ಕನಕಣ್ಣ ಅಲ್ಲಿದ್ದವರು ಇಂಥ ತೋಟದ್ದೆ ಎಂತ ಕೇಳಿದರು. ಆಚಾರ್ಯರು ಹೌದು ಎಂದರು. ಕನಕಣ್ಣ ಹೌದು ಗುರುಗಳೆ, ನಾ ಅತ್ತ ನಡೆಯುತ್ತ ಇದ್ದೆ, ಹೂ ಬಹಳ ಚೆನ್ನಾಗಿತ್ತು, ಅಪ್ಪಾ ಇದು ನಿನಗೆ ಅಂದೆ, ಅಂದರು.

ಗೋವಿಂದ ಒಡೆಯ: ಮಾನಸ ಪೂಜೆ ಮಟ್ಟ ಮುಟ್ಟಿದಾರೆ, ಮಹಾತ್ಮ.

ವ್ಯಾಸರಾಯ: ಈ ತಲೆಮಾರಲ್ಲಿ ಇವರು ಇಬ್ಬರು, ವಾದಿರಾಜರೊಬ್ಬರು, ನಮ್ಮ ಭಕ್ತಿ ಸಂಪ್ರದಾಯದ ರಸ ಇಂಗದ ಹಾಗೆ ನೋಡಿಕೊಂಡಿದಾರೆ. ಮಠ ಇವರನ್ನು ಸರಿಯಾಗಿ ನೋಡಿಕೊಳ್ಳಬೇಕು. ಇದರ

ಹೊಣೆ ಮಠದ ಮೇಲೆ ಇದೆ. ಎಂದರೆ ಶ್ರೀನಿವಾಸತೀರ್ಥರ ಮೇಲೆ, ಅವರ ಬಲಗೈ ನಿಮ್ಮ ಮೇಲೆ.

ಗೋವಿಂದ ಒಡೆಯ : ಅನುಗ್ರಹ. ಸಮಾಧಿಯಲ್ಲಿ ಗುರುಗಳ ದೇಹ ಮರೆಯಾಗಿರುತ್ತೆ. ಹೊರತಾಗಿ ಆತ್ಮ ಈ ಆಶ್ರಿತರನ್ನು ನೋಡಿಕೊಳ್ಳುತ್ತಿರುತ್ತೆ. ನಾವು ದಾಸರಾಯರನ್ನಾಗಲಿ ಕನಕಣ್ಣನವರನ್ನಾಗಲಿ ಅಲಕ್ಷ್ಯವಾಗಿ ನೋಡುವುದಿಲ್ಲ.

ವ್ಯಾಸರಾಯ : ಏನು ಶ್ರೀನಿವಾಸತೀರ್ಥರೆ ?

ಶ್ರೀನಿವಾಸತೀರ್ಥ : ಇಲ್ಲ. ಒಡೆಯರು ಹಿರಿಯರು. ಅವರಂತೆ ನಾನು.
(ಹೊರಗೆ ಕನಕಣ್ಣನ ಧ್ವನಿ ಕೇಳಿಸುತ್ತದೆ.
ನರಗೊಂಬೆಗಳ ಮಾಡಿ ಕುಣಿಸುವ ಗೋವಿಂದ
ನರರ ಆಟ ನೋಡಿಕ್ಕೆನಗುತಿರುವ ಗೋವಿಂದ....)

ವ್ಯಾಸರಾಯ : ಅಕೊ ಕನಕಣ್ಣ ಬಂದರು. ಯೋಚನೆ ಎಂತು ಅಂತು ಮಾತು, ಮಾತು ಎಂತು ಅಂತು ನಡತೆ, ಕನಕಣ್ಣನದು. ನಿಷ್ಕರ್ಷೆ ಎಂದರೆ ನಿಷ್ಕರ್ಷೆ. ದಾಸರಾಯರು ಬಂದ ದಿನ ಬಾ ಎಂದೆವು, ಆಗಲಿ ಎಂದರು. ದಾಸರಾಯರು ಬಂದಿದಾರೆ. ಈತನೂ ಬಂದಿದಾರೆ. (ಸೇವಕ ಬರುತ್ತಾನೆ)

ಸೇವಕ : ಕನಕಣ್ಣ ಬಂದಿದಾರೆ.

ವ್ಯಾಸರಾಯ : ಅವರನ್ನು ಬರಹೇಳು. ದೇವರ ಸನ್ನಿಧಿಯಲ್ಲಿ ದಾಸರಾಯರು ಇದಾರೆ. ಅವರನ್ನೂ ಬರಹೇಳು.

ಸೇವಕ : ಅಪ್ಪಣೆ.

ವ್ಯಾಸರಾಯ : ನಾವು ಈ ಸಂಜೆಯ ಪೂಜೆ ಮುಗಿಸಿ ವೃಂದಾವನಕ್ಕೆ ಹೋಗುತ್ತೇವೆ. ನಾಳೆಯಿಂದ ಪೂಜೆಯ ಹೊಣೆ ನಿಮ್ಮದು (ಎಂದು ಗೋವಿಂದ ಒಡೆಯರಿಗೆ ಪ್ರತ್ಯೇಕವಾಗಿ) ಎರಡು ಮೂರು ದಿನಗಳಲ್ಲಿ ಸಮಾಧಿ ಮಾಡಲು ಏರ್ಪಾಡು ಮಾಡಿಕೊಳ್ಳಿರಿ.

## ಸ್ಥಾನ : ೯

ಇಪ್ಪತ್ತೈದು ವರ್ಷ ಕಳೆದಿದೆ.

ವಿಜಯನಗರ. ನದೀ ತೀರದಲ್ಲಿ ದಾಸರ ಮಂಟಪದ ಬಳಿ ಕನಕಣ್ಣ ಬರುತ್ತಾನೆ.

ಕನಕಣ್ಣ : ಶ್ರೀಲೋಲ, ನಿನ್ನಂಘ್ರಿಯುಗ್ಮವನು ನೆರೆನಂಬಿ
ನಿನ್ನ ಭಕ್ತರ ಪಂಕ್ತಿಯಲಿ ನಿಂತು ಶೋಭಿಸಿದ
ಗುರುವರೇಣ್ಯ ವ್ಯಾಸತೀರ್ಥರಿಪ್ಪತ್ತೈದು
ವತ್ಸರದ ಹಿಂದೆ ನಿನ್ನಡಿಯ ಸಾರುವ ಮುನ್ನ
ನನ್ನ ಕರೆಯಿಸಿಕೊಂಡ ತೆರ, ಈಗ ನನ್ನಣ್ಣ
ದಾಸರಾಯರು, ತಾವು ದಿವವ ಸಾರುವ ದಿವಸ
ಬರುತಿಹುದು, ಆ ಮುನ್ನ ನಿಮ್ಮ ಕಾಣುವ ಬಯಕೆ,
ಎಂದಿರಲು ಅವರ ನೋಡುವ ಎಂದು ನಡೆದಿಹೆನು.
ಬಾಳಿನಲಿ ನಡೆಯುತಿಹದೆಲ್ಲವೂ ನಿನ್ನಿಚ್ಛೆ
ಎಂದು ನಿನ್ನಿಂದರಿತು ನಿನ್ನ ಕರುಣೆಯ ಕೈಯ
ಬರಿ ಒಂದು ಗೊಂಬೆಯಂತೆಲ್ಲ ಹೊತ್ತಲು ನಾನು
ವರ್ತಿಸುತಲಿಹೆನು. ಈ ನಾನು, ಈ ಇಹೆನು, ಇವು
ಎಲ್ಲವೂ ನೀನೆಂದಮೇಲೆ ಬರಿ ನುಡಿಯೆ ಸರಿ.
ನಾ ಇಲ್ಲ ; ಇಹೆ ಅಲ್ಲ ; ನನಗಹಂಕೃತಿ ಇಲ್ಲ.
ಇರುತ ಈ ದೇಹ ಇರುವನಿತು ಕಾಲಕೆ ಸೊಲ್ಲ
ಈ ಬಹಣಿ ಬಿಡಲು ಬಹುದಲ್ಲ. ಕೇಶವರಾಯ,
ಅಂದು ಗುರುವನು ಕಳೆದುಕೊಂಬಂದು ಎಂತಂತು
ಇಂದು ಅಣ್ಣನ ಕಳೆದುಕೊಂಬೆನೇ ಎಂದಂತೆ
ಅಳಲು ಮನವನು ತುಂಬುತಿಹುದು. ಇದು ಸಹ ನಿನ್ನ

ಇಚ್ಛೆ. ನಿನ್ನಕ್ಕರೆಯು ಮಗುವಾಗಿ ನೀನೆನ್ನ
ಸಲಹುತಿಹೆ. ಸಲಹುತಿಹ ಹೊತ್ತಿನಲಿ ಇಂತೊಮ್ಮೆ
ಮನಕೆ ಬೇನೆಯು ಮಾಡಿ ಮತ್ತೊಮ್ಮೆ ನಲಿಸುವೆ.
ಈ ಅಳುವಿನಿಂದಾಗಲಿರುವ ಕಾರ್ಯ ಅದೇನು,
ಆ ನಲಿವಿನಿಂದ ಆಗುವುದು ಅದು ಮತ್ತೇನು,
ನರರ ಮನಸಿಗೆ ನಿಲುಕದಿಹದು ಇದು. . . .

(ಮರೆಯಿಂದ ಧ್ವನಿ: ಕನಕಣ್ಣನವರು! ಯಾವಾಗ ಬಂದಿರಿ?)

ಮದ್ದಣ್ಣ, ಬನ್ನಿ, ಅಣ್ಣಾ ಅವರು ಮಂಟಪದಲ್ಲಿದಾರೋ?

(ಪುರಂದರದಾಸರ ಮಗ ಮಧ್ವಪತಿ ಹಿಂದಿನಿಂದ ಬರುತ್ತಾನೆ)

ಮಧ್ವಪತಿ: ಇರಬೇಕು. ನಾನೂ ಅವರನ್ನ ನೋಡೋಣಾಂತಲೇ ಬಂದೆ. ಈಗತಾನೇ ಬಂದಿರಾ?

ಕನಕಣ್ಣ: ಹೌದು.

ಮಧ್ವಪತಿ: ಅಪ್ಪಾಜಿ ನಿಮ್ಮನ್ನ ನೆನೆಸಿಕೊಂಡರು, ಇಹೊತ್ತು ನಾಳೆ ಬರಬೇಕೂ ಅಂತ.

ಕನಕಣ್ಣ: ಬರುತೇನೆ ಅಂದಿದ್ದೆ.

ಮಧ್ವಪತಿ: ಆ ಸಲ ಬಂದಾಗ.

ಕನಕಣ್ಣ: ಹೌದು.

ಮಧ್ವಪತಿ: ಆಮೇಲೆ ನೀವು ಉಡುಪಿಗೆ ಹೋಗಿದ್ದಿರಿ ಅಂತ ತಿಳೀತು. ಅಲ್ಲಿ ನಡೆದ ಪವಾಡದ ಮಾತು ಊರೆಲ್ಲ ಹಬ್ಬಿದೆ.

ಕನಕಣ್ಣ: ಪವಾಡ?

ಮಧ್ವಪತಿ: ನೀವು ಅಲ್ಲ ಅಂದರೆ ಜನ ಕೇಳುತ್ತೇನು? ಯಾತ್ರೆ ಜನ ಯಾರೋ ಇತ್ತ ಬಂದವರು ಎಲ್ಲಾ ಹೇಳಿದರು. ಅಪ್ಪಾಜಿಯವರ ಕಿವಿಗೂ ಆ ಮಾತೆಲ್ಲ ಬಿತ್ತು. ಅವರು, ಇದು ಯಾವುದೂ ಆಶ್ಚರ್ಯ

ವಿಲ್ಲ, ಕನಕಣ್ಣ ಅಂಶಪುರುಷರು, ಮಹಾಪುರುಷರು, ಅವತಾರ ಪುರುಷರು, ಅಂದರು.

ಕನಕಣ್ಣ : ಕನಕಣ್ಣ ತನ್ನಣ್ಣಾ ಅವರು ಅವನ್ನ ಏನೇನಂತಾರೆ ಅದೆಲ್ಲ ಆಗುತಾನೆ. (ಮರೆಯಿಂದ ಧ್ವನಿ: "ಮಧ್ವಪತಿಯೇನೋ? ಯಾರು ಜೊತೇಲಿ? ಕನಕಣ್ಣ ನೇನೋ")

ಕನಕಣ್ಣ : ಹೌದು ಅಣ್ಣಾ ಅವರೆ.

(ಪುರಂದರದಾಸ ಬರುತ್ತಾನೆ, ಮಧ್ವಪತಿ ಹಿಂದಕ್ಕೆ ಹೋಗುತ್ತಾನೆ.)

ಪುರಂದರದಾಸ : ಯಾರು ಕನಕಣ್ಣನವರೆ! ಬರತೇನೆ ಅಂದಿದ್ದಿರಿ, ಬಂದಿದೀರಿ. ಕೊಟ್ಟ ವರ ತಪ್ಸಿತೆ ಕುಚೇಲಗೆ ಅಂದಹಾಗೆ.

ಕನಕಣ್ಣ : ಇಷ್ಟೆ ವ್ಯತ್ಯಾಸ. ಅಲ್ಲಿ ಪಡೆದವನು ಕುಚೇಲ ; ಇಲ್ಲಿ ಕೊಟ್ಟವನು ಕುಚೇಲ.

ಪುರಂದರದಾಸ : ಕುಚೇಲನ ಭಾಗ್ಯ ಏನು ಕಡಮೇನೇ ಕನಕಣ್ಣ? ಚೇಲ ಕು ಆದರೇನು ಶೀಲ ಸು ಆಗಿರುವಾಗ? ಆ ಕಥೆ ನೆನೆದಾಗಲೆಲ್ಲ ನನಗೆ ಎರಡು ಸಂಗತಿ ಬಹಳ ಸೋಜಿಗ ಅನ್ನಿಸುತ್ತೆ.

ಕನಕಣ್ಣ : ಹೇಳಿರಿ ಕೇಳೋಣ.

ಪುರಂದರದಾಸ : ಅರಮನೇಲಿರೋ ರಾಜರರಾಜ ಈ ಅವಲಕ್ಕೀನ ತಿನ್ನು ತಾನೆಯೇ ಎಂತ ಅವನಿಗೆ ಹೇಗೆ ತೋರಲಿಲ್ಲ? ಇದು ಒಂದು.

ಕನಕಣ್ಣ : ಸರಿ.

ಪುರಂದರದಾಸ : ಆ ಪ್ರಯಾಣದಲ್ಲಿ ದಾರೀಲಿ ಈ ಹಸಿದಹಾರುವ ಅದನ್ನ ತಿನ್ನದೇ ದ್ವಾರಕೀವರೆಗೆ ತಂದನಲ್ಲಾ ಅನ್ನೋದು.

ಕನಕಣ್ಣ : ಎರಡಕ್ಕೂ ಸಮಾಧಾನ ಇದೆಯಲ್ಲ.

ಪುರಂದರದಾಸ : ಹೇಳಿ ಕೇಳೋಣ.

ಕನಕಣ್ಣ : ಚಕ್ರವರ್ತಿ ಮಗ ಸತ್ತ ಅಪ್ಪನಿಗೆ ಇಪ್ಪೇ ಹಿಂಡೀಲಿ ಪಿಂಡ ಹಾಕಿದನಂತೆ.

ಪುರಂದರದಾಸ: ಅಲ್ಲ? "ಯದನ್ನಂ ಪುರುಷಃ" ಅಂದಿದಾರೆ ಆದಿಕವಿ.

ಕನಕಣ್ಣ: ಹೌದು.

ಪುರಂದರದಾಸ: ಇನ್ನೊಂದು ಮಾತಿಗೆ ಸಮಾಧಾನ?

ಕನಕಣ್ಣ: ಹಾರುವ ದಿಟ ಆದರೆ ಅವನಿಗೆ ಹಸಿವಿಂದ ಕಷ್ಟ ಆಗೋಲ್ಲ. ಊಟದಿಂದ ಕಷ್ಟ ಆಗುತ್ತೆ.

ಪುರಂದರದಾಸ: ಹಹಹ, ನಿಮ್ಮ ಮಾತೇ ಚೆನ್ನ. (ಮಧ್ವಪತಿ ಮರಳಿ ಬರುತ್ತಾನೆ) ಏನೋ ಬಂದೆ ಮಧ್ವಪತಿ?

ಮಧ್ವಪತಿ: ರಾತ್ರಿ ಪೇಟೇಲಿ ಭಜನೆಯಂತೆ. ಅದಕ್ಕೆ ಕರಕೊಂಡ ಹೋಗೋಕೆ ಬರತಾರಂತೆ.

ಪುರಂದರದಾಸ: ಬರಲಿ ಹೋಗೋಣ. ಕನಕಣ್ಣನೂ ಬರತಾರೆ ಅಂತ ತಿಳಿಸು. ಬನ್ನಿ ಕನಕಣ್ಣ, ಎರಡು ಮಾತನಾಡೋಣ. ಇಲ್ಲೇ ಕುಳಿತು ಕೊಳ್ಳಿ.

(ದಾರಿಯ ಬದಿಯ ಎರಡು ಕಲ್ಲಮೇಲೆ ಇಬ್ಬರೂ ಕುಳಿತುಕೊಳ್ಳುತ್ತಾರೆ ಮಧ್ವಪತಿ ಹಿಂದಿರುಗುತ್ತಾನೆ)
ಬರುವ ಅಮಾವಾಸ್ಯೆಗೆ ನನಗೆ ನಮ್ಮ ಗುರುಗಳು ಹೇಳಿದ್ದಗಡು ಮುಗಿಯುತ್ತೆ.

ಕನಕಣ್ಣ: ಇದನ್ನು ಹಿಂದಿನ ಸಲವೇ ಹೇಳೋಣಾಯ್ತು.

ಪುರಂದರದಾಸ: ಆ ಸಂಬಂಧದ ಒಂದು ಕೆಲಸ ನಿಮಗೊಪ್ಪಿಸೋದಿತ್ತು. ಅದನ್ನ ಹೇಳೋಣ ಅನ್ನೋದು ಒಂದು. ಅದಕ್ಕೂ ಹೆಚ್ಚಾಗಿ ಕೊನೆಯ ಬಾರಿಯಾಗಿ ಬೇಕೆಂದು ತೋರಿದಷ್ಟು ಹೊತ್ತು ಜೊತೆಯಾಗಿ ಕುಳಿತು ತೋಚಿದ ಮಾತನಾಡೋದು ಅನ್ನೋದು ಒಂದು. ಈ ಎರಡು ಕೆಲಸ ಕ್ಕಾಗಿ ನೀವು ಈ ಸಲ ಬಂದು ಹೋಗಬೇಕು ಅಂತ ಬೇಡಿದ್ದು.

ಕನಕಣ್ಣ: ಮಾತನಾಡೋದು ಸರಿಯೆ. ಈ ಕೊನೇ ಬಾರಿ ಅನ್ನೋದೇ ಅಷ್ಟು ರುಚಿಯಾಗಿಲ್ಲ.

ಪುರಂದರದಾಸ: ನಿಮಗೆ ನಾನು ಹೇಳಬೇಕೇ ಕನಕಣ್ಣ. ಸಂಗಬಿಡದೆ ಮುಕ್ತಿ ಇಲ್ಲ ಅಂತಾರಲ್ಲವೇ. ಸ್ನೇಹ ರುಚಿಯಾಗಿದೆ, ಅದನ್ನ ಬಿಡಲೊಲ್ಲೆ, ಅಂದರೆ ಸಂಗ ಬಿಟ್ಟದ್ದೆಲ್ಲಿ?

ಕನಕಣ್ಣ: ತಾವು ಹಿರಿಯರು. ತಮ್ಮ ಮಾತಿಗೆ ನಾನು ಪ್ರತಿ ಹೇಳೋದಿಲ್ಲ.

ಪುರಂದರದಾಸ: ಈ ಸಲ ಉಡುಪೀಲಿ ಆದ ಪವಾಡದ ಮಾತು ಏನು ಹೇಳಿ. ಜನ ಹೇಳುವುದು ದಿಟ ಅಲ್ಲ?

ಕನಕಣ್ಣ: ಏನು ಹೇಳುತಾರೆ?

ಪುರಂದರದಾಸ: ನೀವು ಹೋಗಿ ಒಂದು ಗೋಡೆ ಹಿಂದೆ ನಿಂತಿರಿ. ದೇವರು ನಿಮ್ಮತ್ತ ಮುಖಮಾಡಿ ತಿರುಗಿದರು. ನೀವು ನೋಡಲಿ ಎಂತ ಗೋಡೆ ಒಂದು ಕಂಡಿ ಆಯಿತು.

ಕನಕಣ್ಣ: ಇಂಥ ಕಥೇಲೆಲ್ಲ ಇರೋ ಅಂತೆ ಇದರಲ್ಲಿ ದಿಟ ಈಸು ಸಟೆ ಈಸು.

ಪುರಂದರದಾಸ: ದಿಟ ಈಸು ಯಾವುದು?

ಕನಕಣ್ಣ: ನಮ್ಮ ಸ್ವಾಮಿಗಳು ಈಗ ಪರ್ಯಾಯದಲ್ಲಿದಾರಲ್ಲಾ ಹೋಗಿ ದೇವರ ದರ್ಶನ ಮಾಡೋಣ ಅಂತ ಹೋದೆ. ಹೋಗತಾ ಸ್ನಾನಮುಗಿಸಿ ಕೊಂಡೆ, ಗುಡಿ ಹತ್ತಿರ ನಡದೆ. ಒಳಗೆ ಪ್ರಾಕಾರೋತ್ಸವ ನಡೆಯು ತಿತ್ತು. ವಾಡಿಕೆಯ ಜನಸಂದಣಿ. ವೇದಘೋಷ ಆಗತಾ ಇದೆ. ಈ ಹೊತ್ತಿನಲ್ಲಿ ನಾನ್ಯಾಕೆ ಅಲ್ಲಿ ಹೋಗೋದು ಅಂದೆ. ಗುಡೀ ಪಶ್ಚಿ ಮದ ಗೋಡೆ ಬಳಿ ನಿಂತೆ. ಯಾರೋ ನೋಡಿದರು ನನ್ನನ್ನ ಬಲ್ಲವರು. ಒಳಗೆ ಬನ್ನಿ ಅಂದರು. ನಾ ಒಲ್ಲೆ ಅಂದೆ. ಸ್ವಾಮಿಗಳಿಗೆ ನೀವು ಅಂದರೆ ತುಂಬ ಅಭಿಮಾನ ಅಂದರು. ಆಗಲಿ, ಆದರೂ ನಾ ಇಲ್ಲೇ ಅಂತ ನಾ ಅಲ್ಲೇ ನಿಂತೆ .ಅವರು ಹೋಗಿ ಸ್ವಾಮಿಗಳಿಗೆ ತಿಳಿಸಿದರು. ಅವರು ಕನಕಣ್ಣನವರ ಮಾತಿಗೆ ಪ್ರತಿ ಹೇಳಬೇಡಿ ಅಂದರು. ನಾನು ನಿಂತಿದ್ದ ತಾವು ಗೋಡೇಲಿ ಒಂದು ಕಂಡಿ ಹೊಡೆಸಿದರು. ಉತ್ಸವ ದೇವರನ್ನು ಗೋಡೇ ಕಡೆ ಕಂಡಿಯತ್ತ ಮುಖಮಾಡಿ ನಿಲ್ಲಿಸಿದರು. ನಾ ನಿಂತ ಕಡೆ ನನಗೆ ದೇವರ ದರ್ಶನ ಆಯಿತು.

ಪುರಂದರದಾಸ: ಇದು ಪವಾಡ ಅಲ್ಲವೇ ಕನಕಣ್ಣ? ಪರ್ಯಾಯ ವಾದಿರಾಜರ ದಾಗೋ ಹೊತ್ತಿಗೆ ನಿಮಗೆ ದರ್ಶನ ಆಯ್ತು. ಇಲ್ಲದಿದ್ದರೆ ಆಗುತಿತ್ತೆ? ಗುಡಿ ಗೋಡೆ ಒಡೆಯುವುದು ಅಂದರೇನು. ಅಷ್ಟು ಜನದೆದುರಿಗೆ ನಿಮಗೆ ಇಂಥ ಮರ್ಯಾದೆ ತೋರಿಸೋದೆಂದರೇನು? ಆದರೆ ವಾದಿ ರಾಜರು ಮಹಾಧೀರರು. ಸರಿ ಅಂತ ಕಂಡದ್ದನ್ನ ನಡಸೋ ಧರ್ಮ ವೀರರು.

ಕನಕಣ್ಣ: ಅಡ್ಡಿ ಇಲ್ಲ.

ಪುರಂದರದಾಸ: ದೇವರನ್ನು ತೋರಿಸೋ ಸಂಗತಿ ಅಂದರಲ್ಲ ಅದು?

ಕನಕಣ್ಣ: ಅದನ್ನ ಏನಂತ ಹೇಳಿದರು?

ಪುರಂದರದಾಸ: ಸಭೆ ನಡೆಯುತ್ತಿತ್ತಂತೆ. ಬ್ರಾಹ್ಮಣರು ದೇವರನ್ನ ನಡಸಿ ಕೊಳ್ಳಲಾರಿರಿ ಅಂತ ನೀವು ಅಂದಿರಂತೆ. ಮಾರನೆಯ ದಿನ ಅವರು ಊಟಕ್ಕೆ ಕೂರುವ ಹೊತ್ತು ಒಂದು ನಾಯಿ ಬಂತಂತೆ. ಅವರು ಅದನ್ನ ಹೊಡೆದರಂತೆ. ದೇವರು ನಾಯಾಗಿ ಬಂದರು ನೀವು ಗುರುತಿಸಲಿಲ್ಲ ಅಂತ ನೀವು ಹೇಳಿದಿರಂತೆ.

ಕನಕಣ್ಣ: ಆಮೇಲೆ?

ಪುರಂದರದಾಸ: ಸ್ವಾಮಿಗಳು ನಗುತ್ತಾ, ದೇವರು ಪ್ಯೈಲಿಗೆಯಾಗಿ ಬಂದರೆ ಬೇರೆ ಏನು ಮಾಡೋದು ಕನಕಣ್ಣ, ಅಂದರಂತೆ. ನೀವು, ದೇವರು ಮಡಿಯಾಗಿ ಬಂದರೂ ಇವರು ಗುರುತಿಸೋದಿಲ್ಲ, ಅಂದಿರಂತೆ. ಮಾರ ನೆಯ ದಿನ ಅವರ ಊಟದ ಹೊತ್ತು ಒಂದು ಹಾವು ಬಂತಂತೆ. ಎಲ್ಲಾ ಓಟಕಿತ್ತರಂತೆ. ಸಂಜೆ ನೀವು ಅವರಿಗೆ, ದೇವರು ಹಾವಾಗಿ ಬಂದರು ನೀವು ಅವರನ್ನು ಗುರುತಿಸಲಿಲ್ಲ, ಅಂದಿರಂತೆ.

ಕನಕಣ್ಣ: ಇದು ಚರ್ಚೆಯಾಗಿ ನಡೆದದ್ದು ನಿಜ. ಆದರೆ ಊಟದ ಹೊತ್ತಿನಲ್ಲಿ ನಾಯಿ ಒಂದು ಬಂತು, ಹಾವು ಒಂದು ಬಂತು ಅನ್ನೋದು ಕಥೆ. ನಾನು ಈ ಎರಡನ್ನು ಉದಾಹರಣೆ ಆಗಿ ಹೇಳಿದೆ.

ಪುರಂದರದಾಸ: ಚರ್ಚೆ ಏನು?

ಕನಕಣ್ಣ : ಎಲ್ಲವೂ ದೇವರು. ಎಲ್ಲಿಯೂ ದೇವರು. ಎಲ್ಲದರಲ್ಲಿಯೂ ದೇವರು. ಇದರ ಮಾತು ನಡೆಯುತಿರಬೇಕಾದರೆ ಸ್ವಾಮಿಗಳು ನನ್ನನ್ನ, ಈ ಮಾತಿಗೆಲ್ಲ ನೀವು ಏನು ಹೇಳುತೀರಿ ಕನಕಣ್ಣ, ಅಂತ ಕೇಳಿದರು. ನಾನು, ಇಂಥ ಹಿರಿಯರ ಮುಂದೆ ಮಾತನಾಡೋಕೆ ನಾನು ಯಾವ ಮಿಣಕಣ್ಣ, ಅಂದೆ. ಸ್ವಾಮಿಗಳು, "ಹಾಗಲ್ಲ. ನಿಮ್ಮಂಥವರ ಮಾತು ನಮಗೆ ತಿಳಿಯಬೇಕು. ಇವರು ಯಾರೂ ತಪ್ಪಾಗಿ ತಿಳಿದುಕೊಳ್ಳೋಲ್ಲ. ಧಾರಾಳವಾಗಿ ಹೇಳಿ," ಎಂದರು. ನಾನು ಅಪ್ಪಣೆ ಅಂದೆ, ಹೇಳಿದೆ. "ಎಲ್ಲವೂ ದೇವರು ಹೌದು. ಎಲ್ಲಿಯೂ ದೇವರು ಹೌದು. ಎಲ್ಲರ ಲ್ಲಿಯೂ ದೇವರು ಹೌದು. ಆದರೆ ಅಷ್ಟೇ ದಿಟವಾಗಿ ನಾನೂ ನೀನೂ ಹೌದು. ಸತ್ಯ ಸುಳ್ಳು ಹೌದು. ಹಾವು ಹೌದು ಹಗ್ಗ ಹೌದು, ನಾಯಿ ಹೌದು ಹಂದಿ ಹೌದು. ಯಾವ ಮಾತೂ ಬರೀ ಬಾಯಿ ಮಾತಾದರೆ ಫಲವಿಲ್ಲ. ಇಂಥ ಸೂತ್ರದ ಮಾತು ಕೇಳಿ, ಮನುಷ್ಯರು ಒಳ್ಳೆಯವರಾಗಬೇಕು," ಅಂದೆ. "ಒಳ್ಳೆಯವ ರಾಗಬೇಕು ಅಂದರೆ? ಬಿಡಿಸಿ ಹೇಳಿ," ಅಂದರು ಸ್ವಾಮಿಗಳು. ನಾನು, "ಹಿರಿಯರ ಉಪದೇಶ ಇದು. ನಾ ಕೇಳಿದ್ದು. ನಾಯಿ ಹಂದಿ ಹಾವು ಹದ್ದು ಯಾವುದೇ ಆಗಲಿ. ಅದನ್ನು ಅದದು ಅಂತ ಕಾಣುತ್ತ ಅದರಲ್ಲಿ ದೇವರಿದಾರೆ ಅನ್ನೋದನ್ನ ನೆನಪಿನಲ್ಲಿಡಬೇಕು. ನಾಯೀನ ಮುಟ್ಟಿಸಿಕೊಳ್ಳೋದು ಬೇಡ, ಹೊಡೆಯ: ಬಾರದು. ಹಾವನ್ನ ಮನೆಗೆ ಕರೆಯೋಣ ಬೇಡ, ಕೊಲ್ಲ ಬಾರದು," ಅಂತ ಅರಿಕೆ ಮಾಡಿದೆ. ದೊಡ್ಡವರು ನಕ್ಕರು. ಯಾರೋ, ನಾಯನ್ನ ಯಾಕೆ ಹೊಡೆಯುತಾರೆ ಅಂದರು. ನಾನು ಯಾಕೆ ಹೊಡೆ ಯುತಾರೋ ಕಾಣೆ ಅಂದೆ. ಅವರು ನಾಯಿ ಮೈಲಿಗೆ ಅಂದರು. ನಾನು ಹಾವು ಮಡಿ ಅಲ್ಲವೆ ಅಂದೆ. ಸ್ವಾಮಿಗಳು ನಕ್ಕರು. "ವಿಜಯ ನಗರದಲ್ಲಿ ಒಂದು ಸಲ ಭೋಜನ ನಡೆಯುವ ಹೊತ್ತು. ಒಂದು ನಾಯಿ ಒಳಗೆ ಬಂತು. ಜನ ಅದನ್ನು ಹೊಡೆದು ಓಡಿಸಿದರು. ದಾಸ ರಾಯರು ಅದರ ಮೇಲೆ ಒಂದು ಪದ್ಯ ಬರೆದರು", ಅಂತ ಹೇಳಿದರು. "ಹಾವು ದೇವರು ಅನ್ನೋರು ಕಲ್ಲಿನ ಹಾವಿಗೆ ಹಾಲಿಡೋ ಹಾಗೆ ನಿಜ ವಾದ ಹಾವಿಗೂ ಹಾಲಿಡಬೇಕು. ಕನಕಣ್ಣ ಹೀಗೆ ಮಾಡಿದ್ದುಂಟು,"

ಅಂತ ಅಪ್ಪಣೆ ಕೊಡಿಸಿದರು. ಈ ಮಾತು ಜನರ ಬಾಯಲ್ಲಿ ಒಂದು ಕಥೆಯಾಗಿ ಬೆಳೆದಿದೆ.

ಪುರಂದರದಾಸ: ಅದೇನೋ ಉಂಟಲ್ಲ. ಇನ್ನು ನಿಮ್ಮ ಅರಮನೇಲಿ ಎಲ್ಲಾ ಚೆನ್ನವೋ?

ಕನಕಣ್ಣ: ಅಣ್ಣಾ ಅವರಿಗೆ ನಾ ಅಂದೇ ಹೇಳಬೇಕಿತ್ತು, ಹೇಳಲಿಲ್ಲ.

ಪುರಂದರದಾಸ: ಏನಾಯಿತು? ಹೇಳದೆ ಹ್ಯಾಗೆ ಬಿಟ್ಟಿರಿ?

ಕನಕಣ್ಣ: ನನ್ನ ಮನೆಯಾಕೆ ತೀರಿಕೊಂಡಳು.

ಪುರಂದರದಾಸ: ನಿಮ್ಮರಸಿ ತೀರಿಕೊಂಡರೆ? ಏನು ಕನಕಣ್ಣ ಇಂಥ ಮಾತನ್ನ ನನಗೆ ತಿಳಿಸದೇ ಇರೋದೆ? ಅಂದರೆ ಹಾಗೆ ನೀವು ಸಂತೋಷವಾಗಿ ಮಾತನಾಡುತಿದ್ದ ಹೊತ್ತಿನಲ್ಲಿ ನಿಮ್ಮ ಮನಸ್ಸಿನಲ್ಲಿ ಈ ದುಃಖ ಇತ್ತೆ?

ಕನಕಣ್ಣ: ಆಕೆ ಭಾಗ್ಯವಂತ ಹೆಣ್ಣು. ದೇವರ ಕೃಪೆ ಇದ್ದಷ್ಟು ಕಾಲ ಬಾಳನ್ನು ಬೆಳಗಿದಳು. ದೇವರಿಚ್ಛೆ ಬಂತು. ಬಿಟ್ಟು ನಡೆದಳು. ನಮ್ಮ ಮಗ ಈಚೆಗೆ ತೀರಿಕೊಂಡ. ಈಗ ನನ್ನ ಮೊಮ್ಮಗ ಪ್ರಭು.

ಪುರಂದರದಾಸ: ಆಯಿತಪ್ಪ. ಈ ಸಂಗತೀಲಿ ದೇವರು ನನ್ನದು ನಿಮ್ಮದು ಒಂದೇ ಅದೃಷ್ಟಮಾಡಿದರು. ಹಿರಿಯರ ವಚನ ಇಲ್ಲವೆ: ನೂರು ಕಾಲ ಬದುಕೋನು ನೂರು ಸಾವು ನೋಡ್ಯಾನು.

ಕನಕಣ್ಣ: ಇದ್ದೂ ಇಬ್ಬರಿಗೂ ಒಂದೇ ಬುದ್ಧೀನೂ ಕೊಟ್ಟರಲ್ಲ.

ಪುರಂದರದಾಸ: ಕೊಟ್ಟರಪ್ಪ. ಅಡ್ಡಿ ಇಲ್ಲ. ತಾಯಿ ತುಳಿದು ಕೋಳೀಪಿಳ್ಳೆಗೆ ಕೇಡಾದದ್ದು ಸುಳ್ಳು ಅಂತ ಮಲಯಾಳದವರದು ಒಂದು ವಚನ. ಹೆಂಡತಿ ಮಕ್ಕಳು ತೀರಿಕೊಂಡ ಮೇಲೆ ಮನಮರುಗುತಾ ನಾ ಅಲ್ಲಿ ಯಾತ್ರೆ ಮಾಡಿದಾಗ ಇದನ್ನ ಕೇಳಿದೆ. ಅನಂತಪದ್ಮನಾಭನ ಸನ್ನಿಧಿಯಲ್ಲಿ ನಿಂತಾಗ ಇದರ ನೆನಪು ಬಂತು. ನೀನು ತುಳಿದು ನನಗೆ ಕೇಡಾಗೋದು ಉಂಟೆ ಎಂತು ಅಪ್ಪನಿಗೆ ಒಪ್ಪಿಗೆ ನುಡಿದೆ. ಅರಸಿ ತೀರಿಕೊಂಡರು ಅಂದರೆ ಈಗ ನಿಮ್ಮನ್ನು ನೋಡಿಕೊಳ್ಳುವರು?

ಕನಕಣ್ಣ : ಅದರದೂ ಒಂದು ಕಥೆ.

ಪುರಂದರದಾಸ : ಹೇಳಿ.

ಕನಕಣ್ಣ : ತೀರಿಕೊಳ್ಳುತಾ ಅರಸಿ, ನಾ ಹೋದ ಮೇಲೆ ನಿನ್ನ ನೋಡಿಕೊಳ್ಳೋರಿಲ್ಲ ಆಗತಾರೆ, ನಮ್ಮ ಮಾಲೀಗೆ ಹೇಳಿದೇನೆ, ಅವಳು ಇಲ್ಲಿ ಬರುತಾಳೆ, ಎಂದಳು. ಮಾಲಿ ಆಕೆಯ ಚೇಟಿ, ಅರಮನೆಯ ಊಳಿಗದವಳು. ನಾನು, ನೀನೇನೋ ಹೆಂಡತಿ, ಅವಳು ನನ್ನ ಹತ್ತಿರ ಸುಳಿಯೋದು ಸರಿಯೆ, ಅಂದೆ. ಅರಸಿ, ಪ್ರಾಯದ ದಿನದಲ್ಲಿ ನನ್ನ ಗೋಜಿಗೆ ಬರದ ಗಂಡು ಮುಪ್ಪಿನಲ್ಲಿ ನನ್ನ ಮಗಳಂತ ಹೆಣ್ಣನ್ನ ಕಾಡೀಯಾ, ಎಂದಳು. ನಾನು, ನಾ ಕಾಡೋಲ್ಲ ಸರಿ, ಜನ ಏನಂತಾರೆ, ಅಂದೆ. ಆಕೆ, ಜನ ಅನ್ನಬೇಕಾದ್ದನ್ನಲಿ, ಅವರಿಗಂತ ನಾವು ಸಾಯೋಕಾಗತದಾ, ಅಂದಳು. ಹೋಗೋಮುನ್ನ ಮಾಲೀನ ಕರತಂದಳು.

ಪುರಂದರದಾಸ : ಈಗ ಈ ಹೆಣ್ಣಾಗು ನಿಮ್ಮನ್ನ ನೋಡಿಕೊಳ್ಳುತಿದೆ.

ಕನಕಣ್ಣ : ನೋಡಿಕೊಳ್ಳುತಿದೆ. ಅದಕ್ಕೆ ನಾ ಹೇಳಿದೇನೆ. ನನ್ನ ನೋಟ ಮಾತು ನಡೆ ರವೆಯಷ್ಟು ಕಸರುಕಂಡಿತೆಂದರೆ ನೀ ಹೊರಟುಹೋಗು ಅಂತ. ಅದು ಅಂದಿದೆ, ನನ್ನ ಪಾಲಿಗೆ ನಿಮ್ಮ ಅರಸಿ ಇಲ್ಲೇ ಇದಾರೆ, ನಾ ಅವರ ಎದುರಲ್ಲಿ ನಡೆಯುತಿದೀನಿ, ಆ ಎದುರಲ್ಲಿ ನಾನೂ ತಪ್ಪೋಲ್ಲ ನೀವೂ ತಪ್ಪೋಲ್ಲ, ಅಂತ. ಹೀಗಿದೆ ಈಗ ಸಂಸಾರ.

ಪುರಂದರದಾಸ: ಈ ದೊಡ್ಡ ಜನದ ಲಕ್ಷಣ ಇದು ಕನಕಣ್ಣ. ನೋಡಿ. ಗುರುಗಳು ದೇಹ ಬಿಟ್ಟು ಇಪ್ಪತ್ತೈದು ವರ್ಷ ಆಯಿತು. ನನಗೆ ಅವರು ಇಲ್ಲೇ ಇದಾರೆ ಅಂತಲೇ ಅನ್ನಿಸುತಿದೆ. ನಿಮ್ಮರಸಿ ತೀರಿ ಕಣ್ಮರೆ ಆಗಿದಾರೆ. ಅವರ ಈ ಚೇಟಿ ಮಗಳಿಗೆ ಅವರು ಇನ್ನೂ ಇದಾರೆ ಅಂತಲೇ ಕಾಣುತಾಇದೆ. ಮಹಿಮೇ ಜನ ಇವರು, ಬಹು ಮಹಿಮೆ ಜನ.

ಕನಕಣ್ಣ : ಹೌದು. ಹುಡುಗಿ ತಾನು ಹೆಣ್ಣು ನಾ ಗಂಡು ಅನ್ನೋ ಅರಿವೇ ಇಲ್ಲ ಅನ್ನೋ ಹಂಗೆ ಹಸು ಮಗುವಿನ ಅಚ್ಚ ಮನಸ್ಸಿನಿಂದ ನಡಕೊಳ್ಳುತಿದೆ. ನನ್ನ ಮನಸ್ಸೂ ಅಂತೇ ಇದೆ. ಬಿಡುವಾದ ಹೊತ್ತಿನಲ್ಲಿ

ಅದು ದೇವರ ಮುಂದೆ ಕುಳಿತು ನನ್ನವೂ ನಿಮ್ಮವೂ ದೇವರ ನಾಮ ಹಾಡತಾ ಇರುತದೆ.

ಪುರಂದರದಾಸ: ದೇವರ ಕೃಪೆ, ನಿಮ್ಮ ಹತ್ತಿರ ಬಂದು ಇನ್ನೊಂದು ಜೀವ ಉದ್ಧಾರ ಆಯಿತು.

ಕನಕಣ್ಣ: ದೊಡ್ಡವರ ಮಾತು. ನನಗೆ ಹೇಳೋ ಮಾತು ಏನೋ ಇದೆ ಅಂದಿರಲ್ಲ.

ಪುರಂದರದಾಸ: ನೀವು ಈಗ ಹೋದೋರು ಅಮಾವಾಸ್ಯೆ ಆಗಿ ಹತ್ತು ದಿನದಲ್ಲಿ ಬನ್ನಿ. ಹತ್ತು ದಿನ ಅಂದರೆ ಮೂರು ದಿನ ಹಿಂಚುಮುಂಚು. ಬಂದು ನನ್ನ ತಂಬೂರಿ ತಕ್ಕೊಂಡು ಗಿರೀಗೆ ಹೋಗಿ ತಿಮ್ಮಪ್ಪನ ಸನ್ನಿಧಿಯಲ್ಲಿ ಅದನ್ನ ಒಪ್ಪಿಸಬೇಕು. ಅದು ಹಿರೀ ಮಗನಿಗೆ ಎಂತ ಯೋಚಿಸಿದ್ದೆ. ಅವನ ಅಪ್ಪನ ಪಾದ ಮೊದಲೇ ಸೇರಿಬಿಟ್ಟ. ಇದು ಈಗ ಸೇರಲಿ.

ಕನಕಣ್ಣ: ಇದ ಮಾಡುತೇನೆ.

ಪುರಂದರದಾಸ: ಈ ಹೊತ್ತು ರಾತ್ರಿ ಭಜನೇಲಿ ಸೇರಿ ನಾಳೆ ಊರತ್ತ ಹೊರಡ ಬಹುದು.

ಕನಕಣ್ಣ: ಆಯಿತು.

ಪುರಂದರದಾಸ: ನಿಮ್ಮನಂತರ ಕನಕಣ್ಣನ ಚರಿತ ಹದಿನೈದು ವರ್ಷ ಅಂದಿದ್ದರು ಗುರುಗಳು. ಮರಳಿ ಕಾಣೋದು ಹದಿನೈದು ವರ್ಷದಾಚೆ.

ಕನಕಣ್ಣ: ದೇವರ ಸನ್ನಿಧೀಲಿ ಒಂದು ಕ್ಷಣಕ್ಕೆ ಕಡಮೆ ಆಚೆ.

## ಸ್ಥಾನ : ೧೦

ಹದಿನೈದು ವರ್ಷ ಕಳೆದಿದೆ. ತಿರುಪತಿಯ ಬೆಟ್ಟದ ಮೆಟ್ಟಿಲ ಪಂಕ್ತಿ.
(ಯಾತ್ರಿಕರು ಮಲೆ ಏರುತ್ತಿದ್ದಾರೆ. ಅವರ ಮಧ್ಯೆ ಕನಕಣ್ಣ, ಮಾಲಿ;
ಇಬ್ಬರು ಸೇವಕರು ಹಿಂದೆ)

ಕನಕಣ್ಣ : ಶ್ರೀವರ, ಕೃಪಾಕರ, ಗದಾಧರ, ಜಗನ್ನಾಥ,
ಮನ್ನಾಥ, ಜೀವನ ವಿಧಾತ, ಕಂಸಾರಿ, ಶ್ರೀ
ಶೇಷಗಿರಿವಾಸ, ನಾರಾಯಣ, ಮುಕುಂದ, ಪರ
ವಾಸುದೇವ, ದಿನೇಶ ವಂಶಾಬ್ಧಿ ಚಂದ್ರ, ಕುರು
ವಂಶನಾಶಕ, ಮಹಾಕ್ರಮ, ಮಹಾಕರ್ಮ, ಹರಿ,
ನನ್ನಪ್ಪ ತಿರುಮಲೆಯ ತಿಮ್ಮಪ್ಪ, ನಿನ್ನ ಮಗ
ನಿನ್ನಿಚ್ಛೆ ಇದ್ದಷ್ಟು ದಿನ ಲೋಕದಲಿ ನಡೆದು
ನಿನ್ನ ಪಾದವನು ಸೇರುವೆನೆಂಬ ಆಸೆಯಲಿ
ನಿನ್ನ ಮಲೆಯಿದನೇರಿ ಸನ್ನಿಧಿಗೆ ಬರುತಿಹೆನು.
ಎಳೆಯ ದಿನದಲಿ ಒಳಗಿನಿಂದ ದನಿಕೊಟ್ಟವನು
ನನ್ನ ನಿನ್ನೂಳಿಗಕೆ ಕರೆದೆ. ಗುರುವರ ಅತ್ತ
ದಾಸರಾಯರು ಇತ್ತ ಬದಿಗಿರುವ ದಿವಸದಲಿ
ದನಿ ಕೇಳದಿತ್ತು. ದಾಸರು ನಿನ್ನ ಸನ್ನಿಧಿಗೆ
ಹೊರಟುವಂತು ನನಗವರ ಜೊತೆ ಇಲ್ಲವಾಗಿ ಈ
ಹದಿನೈದು ವರ್ಷ ಕಳೆದೀಗ ದನಿ ಮತ್ತೊಮ್ಮೆ
ಕೇಳಿಸಿತು. ನನ್ನ ಸನ್ನಿಧಿಗೆ ಬಂದಿಲ್ಲಿಯೇ
ನಿಲ್ಲೆಂದು ನುಡಿಯ ನೀಡಿತು. ಹಸುಳೆ ಇದ ಕುರಿತು
ನಿನ್ನ ಕೃಪೆ ಎನಿತು ತಂದೆ! ಒರೆಯೆ ಬರುವುದೇ ?
ನಾನೆನಿತು ? ನೀನೆಲ್ಲಿ? ಎನಿತು ಲೆಕ್ಕವೊ ನಿನಗೆ
ನನ್ನಂಥ ಒಂದು ಜಂತು ? ಯಾವ ಕೆಲಸಕೆ
ಬಂದೇನು ? ಬ್ರಹ್ಮರುದ್ರೇಂದ್ರ ಮರುತರು ನಿನ್ನ
ಪೂಜಿಸಲು ನಿಂದಿಹರು. ಹದಿನಾಲ್ಕು ಲೋಕಗಳ
ಸೃಜಿಸಿ ಸಲಹುವ ದೈವ, ದೇವರುಗಳಧಿದೈವ



ನೀನು. ನಾನೇತರದು ಅಲ್ಲ. ಇಂತಿರುತ ನೀ,
ನೀ ನೋಡಿಕೊಳಲು ಕಾದಿಹವಸ್ತು ನಾ ಒಂದೆ,
ಬೇರೆ ಯಾರೂ ಇಲ್ಲ, ಏತರದು ಏನಿರಲಿ
ಒಂದು ಸಹ ಇಲ್ಲ, ಎಂಬಂತೆ ಈ ಜೀವನದ
ಎಲ್ಲ ಹೊತ್ತಲಿ ನನ್ನಲಿರುತ ನನ್ನನಃ ಸಲಹಿ
ಉಳಿಸಿಕೊಂಡಿರುವೆಯೋ ! ಈ ಬಣಗು ಚೇತನ
ಏನು ಮಾಡಲುಬಹುದು ನಿನಗೆ ? ಇಂತೆನುತಿಹೆನೆ
ಇದೆ ವೇಳೆ ತೋರುತಿದೆ. ನೀ ಕರುಣಿ. ಸಲಹುವರೆ
ನಾ ಮಹಾವಸ್ತುವಾಗಿರುವ ಕಾರಣವಿಲ್ಲ.
ಹಿರಿಯಕರುಣೆಗೆ ಎಲ್ಲವೂ ಪಾತ್ರ. ಆ ಕರುಣೆ
ಹಿರಿದೆಂತು ಶಕ್ತ ಅಂತೇ. ಜಗವ ಪೊರೆಯುವುದು
ನಿನಗೆ ಬಹುಸುಲಭ. ತಂದೆಯಾದುದರಿಂದ
ಒಟ್ಟದನು ಬಿಡದೆ ಸಲಹುತಲಿರುವೆ. ನನ್ನನೂ
ಸಲಹಿರುವೆ. ನೀ ಬಲ್ಲ ಏನೊ ಕಾರಣಕಾಗಿ
ಇದುವರೆಗೆ ಸಲಹಿ ಇಲ್ಲಿಗೆ ಕರೆದು ತಂದಿರುವ
ವೇಂಕಟಾದ್ರಿನಿವಾಸ, ಓ ಬಂಧು, ಓ ತಂದೆ,
ನನ್ನ ನಿನ್ನಡಿಗೆ ಸೇರಿಸಿಕೊ. ಓ ಕರುಣಾಳು
ಶ್ರೀನಿವಾಸ, ನನ್ನ ಕಾಪಾಡು ಕಾಪಾಡು.
ಕಾಪಾಡು ಕಾಪಾಡು ಕಾಪಾಡು ಕಾಪಾಡು.

(ಇಬ್ಬರು ಯಾತ್ರಿಕರು ಬದಿಗೆ ಬರುತ್ತಾರೆ)

ಬಂದವರು: ನಮಸ್ಕಾರ ಅಣ್ಣಾ ಅವರೆ.

ಕನಕಣ್ಣ: ನಮಸ್ಕಾರ ಅಣ್ಣ.

ಒಬ್ಬ: ಈ ವಯಸ್ಸಿನಲ್ಲಿ ಬೆಟ್ಟ ಏರುತಿದೀರಲ್ಲ. ತೊಟ್ಟಿಲಲ್ಲಿ ಕೂಡಬಾರದೆ?

ಕನಕಣ್ಣ: ಕೂತಹಂಗೇ. ಹಂತ ಬಂದಾಗ ಇಬ್ಬರು ಇತ್ತ ಅತ್ತ ಹಿಡೀತಾರೆ ನಾ ನಡೆಯೋದು ನೆಪ. ನೀವು ಯಾರು?

ಒಬ್ಬ : ನಾವು ಬಂಕಾಪುರ ಕಾಣೆರಿ.

ಕನಕಣ್ಣ : ನಮ್ಮನ್ನು ಬಲ್ಲಿರಿ ಅಂತ ಕಾಣುತ್ತೆ.

ಇನ್ನೊಬ್ಬ : ಬಾಡದ ನಾಡರಸರನ್ನ ಬಂಕಾಪುರದವರು ಕಾಣದೆ ಉಂಟೆ?

ಕನಕಣ್ಣ : ದಿಟ. ನೀವು ನಮಗಾಗಿ ಮೆಲ್ಲಗೆ ನಡೆಯೋಣ ಬೇಡ. ಮುಂದೆ ನಡೀರಿ.

ಇನ್ನೊಬ್ಬ : ಬರತೇವರಿ (ಎಂದು ಮುಂದೆ ನಡೆಯುತ್ತಾರೆ)

## ಸ್ಥಾನ : ೧೧

ತಿರುಪತಿಯಲ್ಲಿ ದೇವಾಲಯದ ಮುಂದಣ ಅಗ್ರಹಾರದ ಬೀದಿಯ ತಲೆಯಲ್ಲಿ.
(ಆಲಯದ ಮಹಂತ ಕೆಲವರು ಸೇವಕರು, ಇತರ ಜನ ನಿಂತಿದಾರೆ. ಕನಕ ದಾಸ, ಮಾಲಿ, ಸೇವಕರು, ಬರುತ್ತಾರೆ)

ಮಹಂತ : ನಮಸ್ಕಾರ ಅಣ್ಣನವರಿಗೆ, ದಯಮಾಡಬೇಕು.

ಕನಕಣ್ಣ : ನಮಸ್ಕಾರ (ಎಂತ ನಿಟ್ಟಿಸಿ ನೋಡುತ್ತಾನೆ).

ಮಹಂತ : ನಾನು ಮಹಂತ. (ಸೇವಕರಿಗೆ) ಓಡಿ ಹೋಗಿ ಓಲಗ ತನ್ನಿ.

ಕನಕಣ್ಣ : ನಮಸ್ಕಾರ ಮಹಂತರಿಗೆ. ಇದೇನು ಇಲ್ಲಿ ನಿಂತಿದೀರಲ್ಲ?

ಮಹಂತ : ತಮ್ಮನ್ನ ಬರಮಾಡಿಕೊಳ್ಳೋಕೆ.

ಕನಕಣ್ಣ : ಹೀಗುಂಟೆ ಮಹಂತರೆ? ನಾನೆಷ್ಟರವನು ಇಂಥ ಮರ್ಯಾದೆಗೆ?

ಮಹಂತ : ನೀವೆಷ್ಟರವರು ನಾವು ಕಾಣೆವೆ? ಇಲ್ಲಿ ಆಲಯದ ಅಂಗಳದಲ್ಲಿ ಸಭೆ ನೆರೆದವೇಳೆ, ನೀವು ಬಂದಿರಿ ಅಂತ ವ್ಯಾಸರಾಯಸ್ವಾಮಿಗಳು ಎದ್ದು ನಿಂತದ್ದು ನಾವು ನೋಡಿದೇವೆ. ನಿಮ್ಮನ್ನ ಹರಿದಾಸ ರತ್ನ ಅಂತಿದ್ದರು.

ಕನಕಣ್ಣ : ಎಂದಿನ ಮಾತು ಹೇಳುತಿದೀರಿ?

ಮಹಂತ : ಆಗ ನಮ್ಮ ಹಿರೀರು ಮಹಂತರಾಗಿದ್ದರು. ನಾನು ಹುಡುಗ. ಈಗ ಐವತ್ತು ವರ್ಷದ ಮಾತು ಅನ್ನಿರಿ.

ಕನಕಣ್ಣ: ನನ್ನ ಗುರುಗಳಿಗೆ ನನ್ನ ಮೇಲೆ ಬಹು ಅಭಿಮಾನ. ಅವರು ಹೀಗೆ ಮಾಡುತಿದ್ದರು. ನಾನು ಅವರಿಗೆ ಹೇಳುತಿದ್ದೆ. ನಾನು ಹರಿದಾಸ ರತ್ನ ಅಲ್ಲ. ಹರಿದಾಸರ ಕಾಲದೆಸೆ ಕುರಿದಾಸ ಗೊತ್ತಾ ನಾ, ಅಂತ. ಅವರು ನಗೋರು. ಹಾಗೇ ಮಾಡೋರು.

ಮಹಂತ: ನೀವೂ ನಗೋರಿ, ಅದನ್ನೇ ಹೇಳೋರಿ. ನೋಡೋ ಜನಕ್ಕೆ ಇಬ್ಬರಲ್ಲಿ ಯಾರು ಹಿರಿಯರೋ ಅನ್ನೋದು ಗುರುತುಹತ್ತದೆ ಕಕವಂಕ ನಾಗೋದು.

ಕನಕಣ್ಣ: ಇರುತಾ ತಾವು ನನಗೆ ಇಷ್ಟು ಮರ್ಯಾದೆ ಮಾಡೋದು ಸರಿಯಾಗೋಲ್ಲ.

ಮಹಂತ: ಯಾಕೆ, ನಾವು ನಾಲ್ಕು ಜನಾನ್ನ ಮುಂದೆ ಕಳುಹಿಸಿದೆವು; ಓಲಗ ದೊಡನೆ. ದಾಸರತ್ನರನ್ನ ಕಂಡು ಓಲಗದೊಡನೆ ಕರತನ್ನಿರೋ ಅಂತ. ಅವರೇನಾದರೋ ತಿಳೀಲಿಲ್ಲ.

ಕನಕಣ್ಣ: ಅವರು, "ದಾಸರತ್ನರು ಬರತಾ ಇದಾರಂತೆ, ಎಲ್ಲಿ ಸ್ವಾಮಿ" ಅಂತ ಒಬ್ಬೊಬ್ಬರನ್ನೂ ಕೇಳುತಾ ಬರುತಿದ್ದರು. ನಮ್ಮನ್ನೂ ಕೇಳಿದರು. "ದಾಸರು ಉಂಟಪ್ಪ. ರತ್ನ ಆದರೆ ಹಿಂದೆ ಬರುತಿರಬೇಕು. ಹೋಗಿ ವಿಚಾರಿಸಿ," ಅಂದೆವು. ಅವರು ಅತ್ತ ನಡೆದರು.

ಮಹಂತ: ಬೆಳ್ಳ ಜನ ಮತ್ತೇನು ಮಾಡುತಾರೆ. ಆದರೆ ನೀವು ನಮ್ಮಿಂದ ಹೀಗೆ ತಪ್ಪಿಸಿಕೊಳ್ಳೋಕೆ ಆಗೋಲ್ಲ. ಈಗ ಓಲಗ ಬರುತ್ತೆ. ಅದರೊಂದಿಗೆ ಆಲಯಕ್ಕೆ ಬಿಜಮಾಡುವಿರಂತೆ.

ಕನಕಣ್ಣ: ಬೇಡಿ ಮಹಂತರೆ, ಬೇಡ.

(ಓಲಗದವರು ಬರುತ್ತಾರೆ.)

ಮಹಂತ: ಓಲಗ ಬಂದಾಯ್ತು. ಬೇಡ ಎನ್ನಬೇಡಿ. ಇದು ನಮ್ಮ ಸಂತೋಷಕ್ಕೆ ಗುರುತಾಗಿ. ವ್ಯಾಸರಾಯರಿಗೆ ಹೀಗೆ ಮಾಡುತಿದ್ದೆವು. ಪುರಂದರದಾಸರಿಗೆ ಕೊನೇ ಕೆಲವುಕಾಲ ಹೀಗೆ ಮಾಡಿದೆವು. ನೀವು

ತ್ರಿಮೂರ್ತಿಗಳಂತೆ ಇದ್ದವರು. ನಿಮಗೆ ಹೀಗೆ ಮಾಡದೆ ಇದ್ದರೆ ನಮ್ಮ ಮನಸ್ಸಿಗೆ ಪೆಚ್ಚಂತ ಆಗುತ್ತೆ.

ಕನಕಣ್ಣ : ಅಪ್ಪಣೆ ಸ್ವಾಮಿ. ದೇವರೇ ನಿಮ್ಮ ವಶದಲ್ಲಿ ನಡೀತಾರಂತೆ. ನಾವು ಬೇರೆ ಏನು ಮಾಡೋದು?

ಮಹಂತ : ಸಂತೋಷ. (ಸನ್ನೆಮಾಡುತ್ತಾನೆ. ವಾದ್ಯ ಆರಂಭ ಆಗುತ್ತದೆ. ಎಲ್ಲ ದೇವಾಲಯದತ್ತ ಹೊರಡುತ್ತಾರೆ.) ತಾವು ಇಲ್ಲಿ ಎಷ್ಟು ದಿನ ನಿಲ್ಲುವ ಯೋಚನೆ?

ಕನಕಣ್ಣ : ನಾನು ಇಲ್ಲೇ ನಿಲ್ಲುತೇನೆ. ದೇವರ ಪಾದಸೇರೋಕೆ ಬಂದಿದೇನೆ.

## ಸ್ಥಾನ : ೧೨

ತಿರುಪತಿ. ದೇವಾಲಯ.

(ದರ್ಶನ ಮುಗಿಸಿಕೊಂಡು ಮಹಂತ, ಕನಕಣ್ಣ, ಹಿಂದಿರುಗಿದಾರೆ. ಆಲಯದ ಬಾಗಿಲ ಬಳಿ ನಿಂತಿದಾರೆ. ಜನ ಇದೆ.)

ಮಹಂತ : ನಮ್ಮ ಮಠಕ್ಕೆ ಬರಬೇಕು. ಅಲ್ಲಿ ಎಲ್ಲಾ ಅನುಕೂಲವನ್ನೂ ಮಾಡಿಕೊಡುತೇನೆ.

ಕನಕಣ್ಣ : ಅವಶ್ಯವಾಗಿ. ನೀವು ನಮ್ಮನ್ನು ಕಂಡಿರುವ ಈ ರೀತಿ ಇಂಥಾದ್ದು, ನಮ್ಮಪ್ಪ ನಿಮ್ಮಲ್ಲಿ ನಿಂತು ಈ ಮುದುಕನನ್ನ ನೋಡಿಕೊಳ್ಳೋದು ಅಂತ ಮನಸ್ಸು ಮಾಡಿದಾನೆ ಅನ್ನಿಸುತ್ತೆ. ಮಹಾ ಮನಸ್ಸು ಅದು. ಅದು ನಿಮ್ಮ ಮನಸ್ಸನ್ನೂ ಮಹಾಮನಸ್ಸು ಮಾಡಿದೆ. ನಮ್ಮನ್ನ ನಿಮಗೆ ತೋಚಿದಂತೆ ನೋಡಿಕೊಳ್ಳಿ. ನಾ ಒಲ್ಲೆ ಅನ್ನೋದಿಲ್ಲ. ನೀವು ಹೇಳೋದೆಲ್ಲ ನಮ್ಮ ಅಪ್ಪನ ಇಚ್ಛೆ ಅಂತ ಒಪ್ಪಿಕೊಳ್ಳುತೇನೆ. ಜೊತೆಗೆ ಇಷ್ಟು ನಡಸಿಕೊಡಿ. ನನಗೆ ಇಲ್ಲಿ ಹೀಗೆ ಹೀಗೆ ಇದ್ದು ಜೀವಾನ ಅಪ್ಪನಿಗೆ ಒಪ್ಪಿಸಬೇಕು ಅಂತ ಆಸೆ ಇದೆ. ಅದನ್ನ ಅರಿಕೆ ಮಾಡತೇನೆ. ಅದನ್ನ ಮಾಡಿಕೊಡಿ.

ಮಹಂತ: ನೀವು ಅಪೇಕ್ಷಿಸಿದ್ದನ್ನ ಶಿರಸಾವಹಿಸಿ ನಡಸುತ್ತೇನೆ.

ಕನಕಣ್ಣ: ಹಾಗಾದರೆ ನಾನು ಇಲ್ಲೇ ಈ ಬಾಗಿಲ ಎದುರಿಗೆ ಬಯಲಲ್ಲಿ ಕುಳಿತಿರುವುದಕ್ಕೆ ಅಪ್ಪಣೆ ಕೊಡಿ. ಈ ಸ್ಥಳ ವೈಕುಂಠ. ಈ ಭಾವವನ್ನ ಅನುಸಂಧಾನ ಮಾಡಬೇಕು ಅಂತ ನನಗೆ ಆಸೆ. ವಿಷ್ವಕ್ಸೇನರು ನೀವು. ಜೀಯರು ಪಾರಾಯಣಕಾರರು, ಸನಕಸನಂದನಾದಿಗಳು. ಏಕಾಂಗಿ, ಅರ್ಚಕ, ಪರಿಚಾರಕರು, ನಿತ್ಯಸೂರಿಗಳು. ಸಾವಿರ ಸಾವಿರವಾಗಿ ಬರುವ ಹೋಗುವ ಭಕ್ತ ಜನ ನಂದಗೋಕುಲದ ನಮ್ಮಪ್ಪನ ಮಕ್ಕಳು. ಇದನ್ನ ಪಾಠ ಮಾಡಿಕೊಳ್ಳಬೇಕು.

ಮಹಂತ: ಆಗಲಿ. ಕುಳಿತ ಕಡೆ ಬಿಸಿಲಿಗೆ ಮರೆಯಾಗಿ ಒಂದು ಚಪ್ಪರ ಹಾಕಿಸತೇನೆ. ಇಷ್ಟ ಬಂದ ಹೊತ್ತೆಲ್ಲ ಅಲ್ಲಿ ಕುಳಿತಿರಿ. ವಿಶ್ರಾಂತಿಗೆ ಮಠದ ಬಿಡಾರಕ್ಕೆ ಬನ್ನಿ.

ಕನಕಣ್ಣ: ಆಗಬಹುದು.

ಮಹಂತ: ಉಳಿದ ಮಾತೆಲ್ಲ ನಿಮ್ಮೊಂದಿಗೆ ಬಂದಿರೋ ಈ ನಿಮ್ಮ ಮಗಳನ್ನ ಕೇಳಿ ಏರ್ಪಾಡು ಮಾಡುತೇನೆ. ತಾವು ಇನ್ನು ಮಾತನಾಡಬೇಡಿ ಈಗ.

ಕನಕಣ್ಣ: ಆಯಿತು.

ಮಹಂತ: ವ್ಯಾಸರಾಯರು ದಾಸರಾಯರು ದಯಮಾಡಿದ ದಿನಗಳಲ್ಲಿ ಭಕ್ತರು ಸೇರಿ ಭಜನೆ ನಡಸುತಿದ್ದರು. ಅಪ್ಪಣೆ ಆದರೆ ಈಗಲೂ ಹಾಗೇ ಅದಕ್ಕೆ ಏರ್ಪಾಡು ಮಾಡುತೇನೆ, ಯಾತ್ರಿಕರಿಗೂ ಇದು ಒಂದು ಅಪರೂಪ ಅವಕಾಶ ಆಗುತ್ತೆ. ತಮಗೂ ಆನಂದ.

ಕನಕಣ್ಣ: ಅವಶ್ಯವಾಗಿ. ಇದನ್ನ ಬೇಡೋಣ ಅಂತಿದ್ದೆ. ನೀವೇ ಕೇಳಿದೀರಿ. ಇನ್ನು ತಾವೆಲ್ಲ ಹೋಗಿ ಬನ್ನಿರಿ. ನಾನು ಇನ್ನಷ್ಟು ಹೊತ್ತು ಇಲ್ಲಿ ಕುಳಿತಿರುತ್ತೇನೆ.

## ಸ್ಥಾನ : ೧೩

ತಿರುಪತಿ. ಮೂರು ತಿಂಗಳು ಕಳೆದಿದೆ.

(ಒಂದು ಸಂಜೆ. ಮಹಂತ ಕನಕನ ಬಳಿ ಬಂದಿದಾನೆ)

ಮಹಂತ : ಮೂರು ತಿಂಗಳು ದೇವರಿಗೆ ಮಹಾ ಉತ್ಸವವಾಗಿ ಬೆಳೆದು ಬಿಟ್ಟಿತು. ಹಿಂದೆ ಎಂದೂ ಹೀಗೆ ಆದದ್ದಿಲ್ಲ.

ಕನಕಣ್ಣ : ಅಪ್ಪನ ಇಚ್ಛೆ.

ಮಹಂತ : ಅಂದರೆ ನೀವು ತೀರ ಕೃಶರಾಗಿಬಿಟ್ಟಿರಿ. ಈ ಶ್ರಮ ಹೆಚ್ಚಾಯಿತು. ಆಹಾರ ನಿದ್ದೆ ಸಾಲದು.

ಕನಕಣ್ಣ : ಎಲ್ಲಾ ಸಾಕು. ನಿಮ್ಮಲ್ಲಿ ಈ ದಿನ ಒಂದು ಅನುಗ್ರಹ ಬೇಡೋಣ ಅಂತ ಮಾಡಿದ್ದೆ.

ಮಹಂತ : ಅಪ್ಪಣೆ ಆಗಲಿ.

ಕನಕಣ್ಣ : ನನ್ನ ಉಸಿರು ಇಂದೋ ನಾಳೆಯೋ ಅಪ್ಪನಪಾದ ಸೇರುತ್ತೆ. ಅದಾಗೋ ಮುನ್ನ ಸನ್ನಿಧೀಲಿ ಏಕಾಂತವಾಗಿ ಒಂದು ಕ್ಷಣ ಕೂರೋಣ ಅಂತ ಆಸೆ.

ಮಹಂತ : ಆಗಲಲ್ಲ. ಈ ರಾತ್ರಿ ಆಗಲೇ ?

ಕನಕಣ್ಣ : ಆಗಲಿ ಅಂದರೆ ಅನುಗ್ರಹ.

ಮಹಂತ : ಆಗುತ್ತೆ.

ಕನಕಣ್ಣ : ಆಮೇಲೆ ಏನು ಆಗುತ್ತೆ ನಾ ಕಾಣೆ. ನೀವು ದೇಹಾನ ಒಡನೆ ಹೊರಕ್ಕೆ ತರಬೇಕು. ಉಸಿರು ಇರೋಅಷ್ಟುಹೊತ್ತು ಇಲ್ಲಿ ಬಾಗಿಲ ಎದುರು ಇರಿಸಿದ್ದು ಅಳಿದೊಡನೆ ಚಂದ್ರಗಿರೀ ಹೊಳೇ ಈ ಬದೀಲಿ ದಹನ ಮಾಡಿಸಬೇಕು.

ಮಹಂತ : ದಹನವೇ ?

ಕನಕಣ್ಣ : ಹೌದು. ಹುಗಿಯೋದು ಅಂದರೆ ಜನ ಗದ್ದುಗೇ ಗಿದ್ದುಗೇ ಅಂತ ಆಭಾಸಮಾಡುತಾರೆ. ನಮ್ಮ ಮೊಮ್ಮಗ ಅಂತಾ ಇದ್ದ. ನಾ ಊರಲ್ಲಿ ತೀರಿಕೊಳ್ಳುತೇನೆ ಅಂತ ತಿಳಿದು. ರಾಜರ ಗದ್ದುಗೆ ಅಂಥಾ ಗದ್ದುಗೆ ಮಾಡಿಸುತ್ತೇನೆ ಅಂತ. ಅವನು ಇಲ್ಲಿಗೆ ಬಂದರೂ ಬಂದನೆ; ಎಲ್ಲಿ ಹುಗಿದಿರಿ ಅಂತ ಕೇಳಿಕೊಂಡು.

ಮಹಂತ : ಕೇಳಿಕೊಂಡು ಬಂದರೆ ನಾವು ಹೇಳೋರೆ, ದಾಸರತ್ನರದು ಗದ್ದುಗೆ ಇರಲಿ, ಭಕ್ತರ ಭಜನೆ ಅವರ ಕಿವಿಗೆ ಬೀಳತಿರಲಿ, ಅಂತ.

ಕನಕಣ್ಣ : ಅದೇ ಬೇಡ ಅಂತ ನನ್ನ ಮನಸ್ಸು. ಅಪ್ಪನ ಸನ್ನಿಧೀಲಿ ತುಂಬುರು ನಾರದರ ಗಾನ ಕೇಳುತಾ ಇರೋನಿಗೆ ಇದೆಲ್ಲಾ ಅದರಲ್ಲಿ ಸೇರಿ ಇದೆ.

ಮಹಂತ : ಅಪ್ಪಣೆ ಅಣ್ಣಾ ಅವರೆ. ಕಿಚ್ಚು ?

ಕನಕಣ್ಣ : ಈ ಹೆಣ್ಮಗಳು ಇದಾಳಲ್ಲ. ನಮ್ಮ ಮೊಮ್ಮಗನ ಹೆಸರಿನಲ್ಲಿ ಇವಳ ಕೈಯಲ್ಲಿ ಇಕ್ಕಿಸಿರಿ.

ಮಹಂತ : ಈಕೆ ನಿಮ್ಮ ಕುಲ ಅಲ್ಲ. ಹೇಳಿದರು.

ಕನಕಣ್ಣ : ಕುಲದ ಮಾತು ನಾ ಹಿಂದೆ ಹೇಳಿದ್ದುಂಟು. ನಾನು ನನ್ನ ಕುಲಾನ ಎಂದೂ ಮರೆಯಲಿಲ್ಲ. ಬೇರೆಯವರ ಕುಲಾನ ಎಂದೂ ನೆನೆಯಲಿಲ್ಲ. ಇವಳ ಜೀವದ ಮಡಿ ಇವಳ ಒಡಲಿನ ಮೈಲಿಗೇನ ತೊಡೆದು ಹಾಕಿದೆ.

ಮಹಂತ : ಆಯಿತು.

ಕನಕಣ್ಣ : ಆದಮೇಲೆ ಈ ಹೆಣ್ಮಗಳನ್ನ ಕ್ಷೇಮವಾಗಿ ಊರಿಗೆ ಕಳುಹಿಸಿರಿ. ಊರಿಂದ ಯಾರು ಬಂದು ಕೇಳಿದರೂ ದಹನ ನಡೆದ ಸ್ಥಳವನ್ನು ತೋರಿಸಬೇಡಿರಿ.

ಮಹಂತ : ಆಯಿತು. ನಾವು ತೋರಿಸುವುದಿಲ್ಲ. ಈಕೆ ತೋರಿಸಿದರೆ?

ಕನಕಣ್ಣ : ಅವಳು ತೋರಿಸೋಲ್ಲ. ಮಾತು ಕೊಟ್ಟಿದಾಳೆ. ನೀವು ಈ ಮಾತು ಕೇಳುವ ಜನಕ್ಕೆ, ಈ ಮನುಷ್ಯ ದೇವರಲ್ಲಿ ಐಕ್ಯ ಆದರು, ಅಂತ ಇಷ್ಟನ್ನು ಮಾತ್ರ ಹೇಳಿರಿ.

ಮಹಂತ : ಆಯಿತು ಅಣ್ಣಾವರೆ. ಇದರಲ್ಲಿ ಒಂದು ಅಕ್ಷರ ತಪ್ಪದಂತೆ ನೋಡಿಕೊಳ್ಳುತೇನೆ.

ಕನಕಣ್ಣ : ನಿಮ್ಮ ಉಪಕಾರ ಇಷ್ಟು ಅಂತ ನಾ ಹೇಳಲಾರೆ, ಮಹಂತರೆ. ಈಗ ನಾಲ್ಕು ಜನವನ್ನ ಕರೆದು ಭಜನೆ ನಡಸಿ ಅಂತ ಅಪ್ಪಣೆ ಮಾಡಿ.

ಮಹಂತ : ಆಯಿತು.

ಕನಕಣ್ಣ : ರಾತ್ರಿ ಏಕಾಂತ ಸೇವೆ ಆಗಬೇಕು.

ಮಹಂತ : ಆಗತ್ತೆ.

ಕನಕಣ್ಣ : ಆ ಕ್ಷಣದ ಹೊತ್ತು ಒಳಗೆ ನಾ ಒಬ್ಬನೇ ಇರಬೇಕು.

ಮಹಂತ : ಒಬ್ಬರೇ ? ಅರ್ಚಕರು ಕೂಡ ಇರಬಾರದು ?

ಕನಕಣ್ಣ : ನನ್ನಪ್ಪ ಹೊರತು ಬೇರೆ ಯಾರೂ ಇರಕೂಡದು ನಿಮ್ಮಂಥ ಜೀವ ಇದ್ದರೆ ತಪ್ಪಲ್ಲ....

ಮಹಂತ : ಆದರೆ ನನ್ನಪ್ಪ ಸಂಕೋಚಪಟ್ಟುಕೊಳ್ಳಬಹುದು.

ಕನಕಣ್ಣ : ಹೌದು ; ಆದ್ದರಿಂದ. . .

ಮಹಂತ : ನಾ ಇರೋದು ಕೂಡ ಬೇಡ. ಇರೋದಿಲ್ಲ, ಅಣ್ಣಾ ಅವರೆ. ಆ ವೇಳೆ ಅಲ್ಲಿ ಬೇರೆ ಯಾರೂ ಇರೋಲ್ಲ. ನೀವು ಉಂಟು ನಿಮ್ಮ ದೇವರುಂಟು.

ಕನಕಣ್ಣ : ಇಷ್ಟು ಮಾಡಿಕೊಡಿ. ನಾ ಉದ್ಧಾರ ಆದೆ.

## ಸ್ಥಾನ : ೧೪

ಮೂರು ದಿನ ಕಳೆದಿದೆ.
ತಿರುಪತಿ ದೇವಾಲಯದ ಮುಂಭಾಗ
(ಮಾಲಿ ದೇವರಿಗೆ ಪ್ರಣಾಮ ಮಾಡಿ ಎದ್ದು ಮಾತನಾಡುತ್ತಾಳೆ.)

ಮಾಲಿ : ನನ್ನಪ್ಪಾ, ತಿಮ್ಮಪ್ಪಾ, ಶ್ರೀನಿವಾಸ ವೆಂಕಟರಮಣ, ನನ್ನ ದಣಿಯೊಂದಿಗೆ ನನ್ನ ನೀ ಇಲ್ಲಿ ಕರತಂದಿ; ದಣೀನ ನಿನ್ನ ಪಾದದಲ್ಲಿ ಸೇರಿಸಿಕೊಂಡಿ. ನನ್ನ ಸೇವೆ ಸಂದು ಆಯಿತು. ನಾ ಇನ್ನ ಹೊರಡತೀನಿ. ನನ್ನ ದಣೀಮನೇನ ಎಲ್ಲ ಹೊತ್ತು ಕಾದುಕೊ. ಎಲ್ಲ ಹೊತ್ತು ನನ್ನ ಜೊತೆಗಿರು. ನನ್ನ ಕಾಪಾಡು.

(ಮಹಂತ ಬರುತ್ತಾನೆ)

ಮಹಂತ : ದೇವರಿಗೆ ಅಡ್ಡಬಿದ್ದು ಆಯಿತೇನವ್ವ?

ಮಾಲಿ : ಆಯಿತು ಒಡೆಯರೆ.

ಮಹಂತ : ಬಂಕಾಪುರದತ್ತ ಹೋಗೋ ಆ ಜನ ಅಣಿಯಾಗಿದಾರೆ. ಅವರ ಜೊತೆಗೆ ಸೇರಿಕೊಂಡರೆ ಸುಖವಾಗಿ ಊರ ಸೇರಬಹುದು.

ಮಾಲಿ : ಆಯಿತು; ಬಂದೆ.

ಮಹಂತ : ಅವರೇ ಇಲ್ಲಿ ಬರುತಾರೆ. ಇಲ್ಲೇ ಇರು. ಊರಲ್ಲಿ ಏನು ಹೇಳಬೇಕು ತಿಳಿದಿದೆಯಲ್ಲ?

ಮಾಲಿ : ಏನೂ ಕಾಣೆ ಅನ್ನಬೇಕು. ತಿಳಿಯೋದೇನು?

ಮಹಂತ : ಅದೇ ತಿಳಿಯಬೇಕು. ಹಿರಿಯರು ಎಂತು ಏನು, ಇದು ಎಲ್ಲರೂ ಕೇಳುವ ಮಾತು. ದೇವರಲ್ಲಿ ಐಕ್ಯವಾದರು, ಇದು ನೀಹೇಳುವ ಮಾತು. ಹಾಗೆಂದರೆ ಎಂತ ಯಾರೂ ಕೇಳಬಹುದು. ನಾ ಏನೂ ಕಾಣೆ ಇದು ನಿನ್ನ ಮಾತು.

ಮಾಲಿ : ಆಯಿತು. ಅಂದರೆ ಇದೊಂದೂ ಬೇಕಾಗೋಲ್ಲ. ಜನವೇ ಈಗಾಗಲೆ ಹೇಳತಿದಾರೆ. ಅವರು ದೇವರಲ್ಲಿ ಐಕ್ಯ ಆದರು ಅಂತ;

ಹೊರಗೆ ಬಂದಂತೆ ಕಂಡರು ನೋಡುತಿದ್ದಹಂಗೇ ಮಾಯ ಆದರು, ಅಂತ. ಐಕ್ಯ ಆದರು ಅಂತ ತಾವೇ ಹೇಳೋರು ನಮ್ಮನ್ನ ಏನ ಯಾಕೆ ಕೇಳತಾರೆ?

ಮಹಂತ: ಅವರು ದೇವರಲ್ಲಿ ಐಕ್ಯ ಆದದ್ದೇ ನಿಜ. ಉಸುರಾಡುತ್ತಿದ್ದ ದೇಹಾನ ಹೊರಕ್ಕೆ ತಂದೆವು, ಉಸುರು ಮುಗಿದ ಮೇಲೆ ಅದನ್ನ ಕಿಚ್ಚಿಗೆ ಕೊಟ್ಟೆವು. ಅಂದರೆ ಅದನ್ನ ಹೊರಕ್ಕೆ ತರುವ ಮುನ್ನ ಅವರ ಜೀವ ದೇವರ ಪಾದದಲ್ಲಿ ಅಡಗಿ ಆಗಿತ್ತು.

ಮಾಲಿ: ಅದು ಎಂದೋ ಆಗಿತ್ತು ಒಡೆಯರೆ. ಅಂದು ಬೇರೆ ಏನು?

ಮಹಂತ: ಸೈ. ಜನ ಬಂದು ಅವರ ಹೆಸರಲ್ಲಿ ಗದ್ದುಗೆ ಮುಂತಾದ್ದು ಮಾಡಿಸೋಣ ಬೇಡ ಅಂತ ಅವರ ಆಸೆ. ಅದನ್ನ ನಡಸಬೇಕಲ್ಲ. ನಾವಿಬ್ಬರೂ ಮನಸ್ಸುಮಾಡಿದರೆ ಇದು ನಡೆಯುತದೆ. ನಾ ಮನಸ್ಸು ಮಾಡಿ ಆಗಿದೆ. ನೀನೂ ಮಾಡಬೇಕು.

ಮಾಲಿ: ನಾ ಮಾಡಿ ಆಗಿದೆ, ಒಡೆಯರೆ.

(ಕೆಲವು ಜನ ಬರುತ್ತಾರೆ)

ಮಹಂತ: ಅಕೋ ಜನ ಬಂದರು. (ಅವರಿಗೆ) ಬನ್ನಿ, ಅಪ್ಪಾ; ನಿಮ್ಮ ಜೊತೆಗೆ ಬರುವ ಅವ್ವಾ ಇವರೆ. ಹೋಗಿ ಬರತೀಯಾ ತಾಯಿ?

ಮಾಲಿ: ಕಳುಹಿಸಿಕೊಡಿರಿ, ಒಡೆಯರೆ, ಹೋಗಿ ಬರುತೀನಿ.

(ಎಂದು ದೇವರತ್ತ ಮುಖ ಮಾಡಿ ಕೈಮುಗಿದು ಅಳುತ್ತಾಳೆ)

ಮಹಂತ: ಅಳಬೇಡ ತಾಯಿ. ಅವರ ಮೈ ಕಾಣುತ್ತಿಲ್ಲ ಹೊರತಾಗಿ ಅವರು ನಮ್ಮನ್ನ ಬಿಟ್ಟುಹೋಗಿಲ್ಲ. ಇಲ್ಲಿ ದೇವರೊಂದಿಗೆ ನನ್ನ ಜೊತೆಯಲ್ಲಿರುತ್ತಾರೆ. ದಾರಿಯಲ್ಲಿ ದೇವರೊಂದಿಗೆ ನಿನ್ನ ಜೊತೆಯಲ್ಲಿರುತ್ತಾರೆ. ಅವರು ಸದಾ ನಮ್ಮೊಂದಿಗೆ ಇದಾರೆ ಎಂತಲೇ ನಾವು ತಿಳಿದಿರಬೇಕು.

ಮಾಲಿ: ತಿಳಿದಿರತೀನಿ, ಒಡೆಯರೆ.

ಮಹಂತ: ಒಳ್ಳಿತು. ಈ ಪ್ರಸಾದ ಕೋ. ಹೋಗಿ ಬಾ. ಹೋಗೋ ಮುನ್ನ ದೇವರ ಎದುರು ದಣಿಗಳದು ಆ ಮಂಗಳದ ಹಾಡು ಹಾಡು.

ಮಾಲಿ: ಆಯಿತು, ಒಡೆಯರೆ (ಎಂದು ಹಾಡುತ್ತಾಳೆ)

ಮಂಗಳಂ ಜಯಮಂಗಳಂ ಶುಭಮಂಗಳಂ
ಮಂಗಳಂ ಜಯಮಂಗಳಂ ಶುಭಮಂಗಳಂ

ಅಂಧಕನನುಜನ ಕಂದನ ತಂದೆಯ
ಕೊಂದನ ಶಿರದಲಿ ನಿಂದವನ
ಚಂದದಿ ಪಡೆದನನಂದನೆಯಳ ನಲ
ವಿಂದಧರಿಸಿದ ಮುಕುಂದನಿಗೆ || ಮಂಗಳಂ ||

ರಥವನಡರಿ ಸುರಪಥ ತಿರುಗುವವನ
ಸುತನಿಗೆ ಶಾಪವನಿತ್ತವನ
ಖತಿಯ ತಡೆದನ ಸತಿಯ ಜನನಿ ಸುರ
ಸತಿಯರನಾಳಿದ ಚತುರನಿಗೆ || ಮಂಗಳಂ ||

ಹರಿಯಮಗನ ಶಿರತರಿದನ ತಂದೆಯ
ಹಿರಿಯ ಮಗನ ತಮ್ಮನ ಪಿತನ
ಭರದಿ ಭುಜಿಸಿದನ ಶಿರದಲಿ ನಟಿಸಿದ
ವರಕಾಗಿನೆಲೆಯಾದಿಕೇಶವಗೆ || ಮಂಗಳಂ ||

---

